# ಡಾ. ಎಂ. ಚಿದಾನಂದ ಮೂರ್ತಿ

ಎಸ್. ಎಸ್. ಅಂಗಡಿ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಡಾ. ಎಂ. ಚಿದಾನಂದಮೂರ್ತಿ

ಎಸ್. ಎಸ್. ಅಂಗಡಿ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

**Dr. M. Chidanandamurthy** - By S. S. Angadi, published by Dr. Karigowda, Beechanahalli, Director, Prasaranga, Kannada University Hampi, Vidyaranya, Kamalapura - 583 221, Pages : viii+30, Rs. 10/-

First Edition 1995

**ನಮ್ಮವರು ಪುಸ್ತಕಮಾಲೆ - ೩**



ಮುಖಪುಟ ವಿನ್ಯಾಸ : ಕೆ. ಮಕಾಳಿ

ಪ್ರಕಾಶಕರು
**ಡಾ. ಕರೀಗೌಡ ಬೀಚನಹಳ್ಳಿ**
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಾಮಲಾಪುರ-೫೮೩ ೨೨೧

**ಬೆಲೆ : ಹತ್ತು ರೂಪಾಯಿಗಳು**

ಮುದ್ರಕರು
ನೇತ್ರಾ ಪ್ರಿಂಟರ್ಸ್
ಚಾಮರಾಜಪೇಟೆ, ಬೆಂಗಳೂರು-೫೬೦ ೦೧೮

# ನಿವೇದನೆ

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು, ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೇ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ, ಬೆಳಕನ್ನು ಉಂಟು ಮಾಡಿವೆ, ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರ-ಕಲೆ, ಅಭಿಜಾತ-ಜಾನಪದ, ಮಾರ್ಗ-ದೇಸಿ, ಸ್ವಕೀಯ-ಪರಕೀಯ, ಪೌರ್ವಾತ್ಯ-ಪಾಶ್ಚಾತ್ಯ ಈ ಬಗೆ ದ್ವಂದ್ವಗಳ ಸಾಮರಸ್ಯ ಮತ್ತು ಸಂಘರ್ಷಗಳ ಒಡಲಿನಲ್ಲಿ ಹುಟ್ಟಿಬರುವ ತಿಳುವಳಿಕೆಯನ್ನು ಹಿಡಿದುಕೊಂಡು ಕನ್ನಡದಲ್ಲಿ ಅದಕ್ಕೆ ಅಭಿವ್ಯಕ್ತಿಯನ್ನು ಕೊಡಬೇಕಾಗಿದೆ. ಭಾಷೆಯಲ್ಲಿ ಮೂಡಿ ಬರುವ ತಿಳುವಳಿಕೆ ಮಾತ್ರ ಉಪಯುಕ್ತವಾಗಬಲ್ಲದು. ಅನುವಾದ, ಭಾಷಾಂತರ, ವಿವರಣೆ, ಟೀಕೆ, ವಿಮರ್ಶೆ ಇಂಥ ವಿಧಾನಗಳನ್ನು ಅನುಸರಿಸುತ್ತ ತಿಳುವಳಿಕೆಯ ಹೊಸ ಸಾಹಿತ್ಯ ನಿರ್ಮಾಣವಾಗಬೇಕು. ಅಂಥ ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ, ಅವಕಾಶವೂ ಇದೆ.

ಹೀಗೆ ಮೂಡಿ ಬಂದ ಸಾಹಿತ್ಯ ಪ್ರಕಟವಾಗಬೇಕು. ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗಕ್ಕೆ ಇಂಥ ಗುರುತರವಾದ ಜವಾಬ್ದಾರಿಯಿದೆ. ವಿದ್ಯೆಯ ಸೃಷ್ಟಿಯಾಗುವುದು ಈ ಪ್ರಸಾರಾಂಗದಲ್ಲಿ. ನಾಡಿನ ತಜ್ಞರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವುದರ ಜೊತೆಗೆ, ವಿಶ್ವವಿದ್ಯಾಲಯ ಸೃಷ್ಟಿಸುತ್ತಿರುವ ಸಾಹಿತ್ಯವನ್ನೂ ಅದು ಪ್ರಕಟಿಸಬೇಕು. ಇದು ತಿಳುವಳಿಕೆಗೆ ಪರಿಪ್ರೇಕ್ಷ್ಯವನ್ನು ಕಟ್ಟುವ ಕೆಲಸ. ನಾಡಿನ ಪ್ರಕೃತಿಯಂತೆ ನಾಡಿನ ಸಂಸ್ಕೃತಿ ಕೂಡ ಈ ಪರಿಪ್ರೇಕ್ಷ್ಯವಿಲ್ಲದೆ ತನ್ನ ಅರ್ಥವನ್ನು ಕಳೆದುಕೊಳ್ಳುತ್ತಿದೆ. ಕಲ್ಲಿನಲ್ಲಿರುವ ಶಾಸನಗಳನ್ನು ಕಣ್ಣೆತ್ತಿ ನೋಡದ ಜನ ಅದೇ ಪುಸ್ತಕದಲ್ಲಿ ಪ್ರಕಟಗೊಂಡರೆ ಓದುತ್ತಾರೆ, ಅರ್ಥ ಮಾಡಿಕೊಳ್ಳುತ್ತಾರೆ. ಜನರಾಡುವ ಶಬ್ದಗಳನ್ನೇ ಕೋಶದಲ್ಲಿ ಸಂಗ್ರಹಿಸಿದರೆ ಆ ಶಬ್ದಗಳಿಗೆ ತಿಳುವಳಿಕೆಯ ಬೆಲೆ ಬರುತ್ತದೆ.

ನಮ್ಮ ಪ್ರಸಾರಾಂಗ, ಈಗಾಗಲೇ ಕೆಲವು ಪುಸ್ತಕಗಳನ್ನು ಪ್ರಕಟಿಸಿದೆ. ಪ್ರಸಾರಾಂಗ, ತನ್ನ ಪ್ರಕಟಣೆಗಳ ಮೂಲಕ ಸಾರ್ಥಕವಾಗಬೇಕಾದ ದಾರಿಯನ್ನು ಹುಡುಕಿಕೊಳ್ಳುತ್ತಿದೆ. ಲೋಕದಲ್ಲಿಯ ತಿಳುವಳಿಕೆಯನ್ನು ಸಂಗ್ರಹಿಸಿ ತಿರುಗಿ ಲೋಕಕ್ಕೇ ದಾನ ಮಾಡುವ ಪ್ರಕ್ರಿಯೆ ಪ್ರಸಾರಾಂಗದಲ್ಲಿ ನಡೆಯುತ್ತಿದೆ. ಸಂಗ್ರಹವಾದ ತಿಳುವಳಿಕೆಗೆ ಗ್ರಂಥಗಳ ರೂಪವನ್ನು ಕೊಡುವ ಹೊಣೆಗಾರಿಕೆ ಪ್ರಸಾರಾಂಗದ್ದಾಗಿದೆ. ಈ ರೂಪಾಂತರದ ಪ್ರಕ್ರಿಯೆ ನಮ್ಮ ವಿಶ್ವವಿದ್ಯಾಲಯದ ವೈಶಿಷ್ಟ್ಯವಾಗಿದೆ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು

# ಪರಿವಿಡಿ

# ಡಾ. ಎಂ. ಚಿದಾನಂದಮೂರ್ತಿ

ಆಧುನಿಕ ಕನ್ನಡ ಸಂಶೋಧನೆಯಲ್ಲಿ ಡಾ. ಎಂ. ಚಿದಾನಂದಮೂರ್ತಿಯವರದು ದೊಡ್ಡ ಹೆಸರು. ವಿದ್ವತ್ ಪ್ರಪಂಚದಲ್ಲಿ ಸಂಶೋಧಕರೆಂದೇ ಅವರನ್ನು ಗುರುತಿಸುವುದು. ನಂತರ ಕನ್ನಡ ಚಳುವಳಿಯ ನಾಯಕರಾಗಿ ನಮಗೆ ಕಾಣಿಸುತ್ತಾರೆ.

## ಬಾಲ್ಯ ಮತ್ತು ವಿದ್ಯಾಭ್ಯಾಸ

ಎಂ. ಚಿದಾನಂದಮೂರ್ತಿಯವರು(ಎಂ. ಮಠದ) ಹುಟ್ಟಿದ್ದು ಶಿವಮೊಗ್ಗ ಜಿಲ್ಲೆಯ ಚೆನ್ನಗಿರಿ ತಾಲೂಕಿನ ಹಿರೇಕೋಗಲೂರಿನಲ್ಲಿ. ತಂದೆ ಕೊಟ್ರಯ್ಯ, ತಾಯಿ ಪಾರ್ವತಮ್ಮ ಎಂಬ ವೀರಶೈವ ದಂಪತಿಗಳಿಗೆ ಎರಡನೆಯ ಮಗನಾಗಿ ೧೯೩೧, ಮೇ ೧೦ ರಂದು ಜನಿಸಿದರು.

ಚಿದಾನಂದಮೂರ್ತಿಯವರು ಬಾಲ್ಯದಿಂದಲೂ ಉನ್ನತ ಬುದ್ಧಿಶಕ್ತಿ ಹೊಂದಿದವರಾಗಿದ್ದರು. ಆಟ, ಪಾಠ ಎಲ್ಲದರಲ್ಲಿಯೂ ಮುಂದು. ಅವರ ಪ್ರಾಥಮಿಕ, ಮಾಧ್ಯಮಿಕ ಶಿಕ್ಷಣ ನೀತಿಗೆರೆ, ಸಂತೆಬೆನ್ನೂರು ಮತ್ತು ಕೋಗಲೂರಿನಲ್ಲಿ ನಡೆಯಿತು. ದಾವಣಗೆರೆಯಲ್ಲಿ ಪ್ರೌಢಶಾಲಾ ಶಿಕ್ಷಣ ಮುಗಿಸಿದರು. 'ಜಾಣ ವಿದ್ಯಾರ್ಥಿ' ಎಂದೇ ಅವರಿಗೆ ಖ್ಯಾತಿ. ಎಲ್ಲ ಶಿಕ್ಷಣ ಹಂತಗಳಲ್ಲಿಯೂ ಪ್ರಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾಗಿ ತಮ್ಮ ಗುರುವೃಂದಕ್ಕೆ ಅಚ್ಚುಮೆಚ್ಚಿನ ವಿದ್ಯಾರ್ಥಿ ಎನಿಸಿಕೊಂಡರು.

ದಾವಣಗೆರೆಯ ಇಂಟರ್‌ಮೀಡಿಯಟ್ ಕಾಲೇಜಿಗೆ ವಿಜ್ಞಾನ, ಗಣಿತದ ವಿದ್ಯಾರ್ಥಿಯಾಗಿ ಚಿದಾನಂದಮೂರ್ತಿಯವರು ಸೇರಿಕೊಂಡರು. ಅಲ್ಲಿ ಕನ್ನಡ ಅಧ್ಯಾಪಕರಾಗಿದ್ದ ಡಾ. ಜಿ.ಎಸ್. ಶಿವರುದ್ರಪ್ಪನವರ ಪಾಠಗಳಿಂದ ತುಂಬಾ ಪ್ರಭಾವಿತರಾದರು. ಶಿವರುದ್ರಪ್ಪನವರ ಪಾಠಗಳು ಚಿದಾನಂದಮೂರ್ತಿಯವರ ಜೀವನದಲ್ಲಿ ಮಹತ್ವದ ತಿರುವು ಉಂಟಾಗಲಿಕ್ಕೆ ಕಾರಣವಾಯಿತೆಂದು ಹೇಳಬೇಕು. ನಂತರ ಕನ್ನಡ ಆನರ್ಸ್ ವಿದ್ಯಾರ್ಥಿಯಾಗಿ ಮೈಸೂರು ಮಹಾರಾಜ ಕಾಲೇಜು ಪ್ರವೇಶಿಸಿದರು.

ಮೈಸೂರು ಮಹಾರಾಜ ಕಾಲೇಜಿನಲ್ಲಿ ಕುವೆಂಪು, ಡಿ.ಎಲ್.ಎನ್ ಮುಂತಾದ ಶ್ರೇಷ್ಠ ಪ್ರಾಧ್ಯಾಪಕರ ವಿದ್ಯಾರ್ಥಿಯಾಗಿ ಕಾವ್ಯ, ವ್ಯಾಕರಣ, ಛಂದಸ್ಸು ಮುಂತಾದ ವಿಷಯಗಳನ್ನು

ಶ್ರದ್ದೆಯಿಂದ ಅಭ್ಯಾಸಮಾಡಿ ತಮ್ಮದನ್ನಾಗಿಸಿಕೊಂಡು ಬಿ.ಎ (ಅನರ್ಸ್) ಪ್ರಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾದರು.

ಅಧ್ಯಾಪಕ

ಚಿದಾನಂದಮೂರ್ತಿಯವರು ವೃತ್ತಿಜೀವನಕ್ಕೆ ಕಾಲಿರಿಸಿದ್ದು ೧೯೫೩ರಲ್ಲಿ. ಬೆಂಗಳೂರು, ತುಮಕೂರು, ಕೋಲಾರಗಳಲ್ಲಿ ಕನ್ನಡ ಅಧ್ಯಾಪಕರಾಗಿ ಸೇವೆ ಸಲ್ಲಿಸಿ ತಮ್ಮ ವಿದ್ವತ್ತು, ಬೋಧನಾಕ್ರಮ, ಉತ್ಸಾಹಗಳಿಂದ ' ಒಳ್ಳೆಯ ಅಧ್ಯಾಪಕ ' ರೆಂದು ಹೆಸರು ಪಡೆದರು. ಕೋಲಾರದಲ್ಲಿರುವಾಗಲೇ ಎರಡು ವರ್ಷ ಮೈಸೂರಿಗೆ ಬಂದು ಎಂ.ಎ. ಪದವಿಯನ್ನು ಪಡೆದರು. ನಂತರ ಮೈಸೂರು ಯುವರಾಜ ಕಾಲೇಜಿಗೆ ಅಧ್ಯಾಪಕರಾಗಿ ಬಂದರು.

ಚಿದಾನಂದಮೂರ್ತಿಯವರ ಬರಹವನ್ನು, ಅಭ್ಯಾಸ ಮನೋವೃತ್ತಿಯನ್ನು ಸಮೀಪದಿಂದ ನೋಡುತ್ತಾ, ಮೆಚ್ಚುತ್ತಾ ಬಂದ ಮತ್ತು ಪ್ರತಿಭೆಗಳನ್ನು ಗುರುತಿಸಿ ಪ್ರೋತ್ಸಾಹಿಸುವ ಮನೋವೃತ್ತಿ ಹೊಂದಿದ ತೀ.ನಂ.ಶ್ರೀಯವರು ಅವರನ್ನು ಮಾನಸ ಗಂಗೋತ್ರಿಯ ಸ್ನಾತಕೋತ್ತರ ಕನ್ನಡ ವಿಭಾಗಕ್ಕೆ ಕರೆಯಿಸಿಕೊಂಡರು. ಚಿದಾನಂದ ಮೂರ್ತಿಯವರು ಇದನ್ನು ಕೃತಜ್ಞತೆಯಿಂದ ಸ್ಮರಿಸುತ್ತಾರೆ : 'ನನ್ನ ಅಧ್ಯಾಪನ, ಸಂಶೋಧನ ಜೀವನಕ್ಕೆ ಒಂದು ಹೊಸ ತಿರುವು ಅದರಿಂದ ಪ್ರಾಪ್ತವಾಯಿತು' ಎನ್ನುತ್ತಾರೆ. ಅವರ ಸಂಶೋಧನೆಗೆ ಇಲ್ಲಿ ತಕ್ಕ ನೆಲೆ ಸಿಕ್ಕಿತು. ಶ್ರೇಷ್ಠ ವಿದ್ವಾಂಸರು ಅವರ ಗುರುಗಳೂ ಆದ ತೀ.ನಂ.ಶ್ರೀ, ಡಿ.ಎಲ್.ಎನ್‌ರವರ ನೇರ ಸಂಪರ್ಕ ಪಡೆದು ಒಡನಾಡಿಗಳಾದರು. 'ಜ್ಯೋತಿ ಮುಟ್ಟಿದ ಬತ್ತಿ ಜ್ಯೋತಿಯಾದಂತೆ' ಅವರಂತೆ ಸಂಶೋಧಕರಾಗಿ, ವಿದ್ವಾಂಸರಾಗಿ ರೂಪುಗೊಂಡರು.

ಮೈಸೂರು ವಿಶ್ವವಿದ್ಯಾಲಯದಲ್ಲಿ ಏಳು ವರ್ಷಗಳ ಕಾಲ (೧೯೬೦-೬೭) ಅಧ್ಯಾಪಕರಾಗಿ ಸೇವೆ ಸಲ್ಲಿಸಿದರು, ಈ ಅವಧಿಯಲ್ಲಿಯೇ ಪ್ರೊ. ತೀ.ನಂ.ಶ್ರೀಯವರ ಮಾರ್ಗದರ್ಶನದಲ್ಲಿ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಎಂಬ ಮಹಾ ಪ್ರಬಂಧವನ್ನು ರಚಿಸಿ ಪಿಎಚ್.ಡಿ ಪದವಿಯನ್ನು ಪಡೆದುಕೊಂಡರು.

ಸಂಶೋಧನೆಯ ಬಗ್ಗೆ ಚಿದಾನಂದಮೂರ್ತಿಯವರ ಅಭಿಪ್ರಾಯಗಳು ಪುನಃ ಪುನಃ ನನ್ನ ನೆನೆಪಿಗೆ ಬರುತ್ತವೆ. ಅವುಗಳಲ್ಲಿ ಒಂದನ್ನು ಇಲ್ಲಿ ದಾಖಲಿಸುತ್ತೇನೆ. 'ಸಂಶೋಧನೆ ಒಬ್ಬ ವ್ಯಕ್ತಿಯನ್ನು, ಅದನ್ನು ಅವನು ಗಂಭೀರವಾಗಿ ತೆಗೆದುಕೊಂಡರೆ ಪ್ರಾಮಾಣಿಕನನ್ನಾಗಿ ರೂಪಿಸುತ್ತದೆ. ಬೌದ್ಧಿಕ ಕ್ರಿಯೆಯನ್ನಾಗಿ ಸಂಶೋಧನೆಯನ್ನು ಆರಿಸಿಕೊಂಡ ವ್ಯಕ್ತಿ ಅಲ್ಲಿ ಸತ್ಯವನ್ನೇ ಹೇಳಬೇಕೆನ್ನುವ ತತ್ವವನ್ನು ತನ್ನ ಜೀವನಕ್ಕೂ ಅನ್ವಯಿಸಿಕೊಳ್ಳಲು ಪ್ರಚೋದಿಸುತ್ತದೆ' ಎಂಬುದು ಗಮನಾರ್ಹ ಅಂಶವಾಗಿದೆ.

ಕನ್ನಡ ಚಳುವಳಿಯ ನಾಯಕರಾಗಿ

ಚಿದಾನಂದಮೂರ್ತಿಯವರು ೧೯೮೨ರನಂತರ ಗೋಕಾಕ ಚಳುವಳಿಯಿಂದಾಗಿ ತಮ್ಮನ್ನು ತಾವು ಪೂರ್ಣವಾಗಿ ಕನ್ನಡದ ಕೆಲಸಗಳಿಗಾಗಿ, ಕನ್ನಡ ಪರಸಂಘಟನೆಗಳಿಗಾಗಿ

ತೊಡಗಿಸಿಕೊಂಡಿದ್ದಾರೆ. ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಇನ್ನೂ ತಮ್ಮ ಸೇವೆ ಇರುವಾಗಲೇ ಸ್ವಯಂ ನಿವೃತ್ತಿ ಪಡೆದು ಕನ್ನಡದ ಕೆಲಸಗಳಿಗಾಗಿ ತಮ್ಮ ಮುಂದಿನ ಬದುಕನ್ನು ಮೀಸಲಿಟ್ಟಿದ್ದಾರೆ. ಚಿದಾನಂದಮೂರ್ತಿಯವರೇ ಹೇಳುತ್ತಾರೆ: 'ಸಂಶೋಧನೆ ನನ್ನ ಮೊದಲ ಪ್ರೇಮ. ಚಳುವಳಿ ಎರಡನೆಯ ಪ್ರೇಮ ಮತ್ತು ಕೊನೆಯ ವ್ಯಾಮೋಹ. ನನ್ನ ಮಟ್ಟಿಗೆ ಸಂಶೋಧನೆ ಮತ್ತು ಚಳುವಳಿಗಳೆರಡೂ ಪರಸ್ಪರ ವಿರೋಧವಾದುದೇನೂ ಅಲ್ಲ; ಎರಡರ ಮುಂದೂ ಇರುವುದು ಕರ್ನಾಟಕವೇ'.

ಚಿದಾನಂದಮೂರ್ತಿಯವರು ಕನ್ನಡದ ಕೆಲಸಕ್ಕೆ ೧೯೮೮ರಲ್ಲಿ 'ಕನ್ನಡ ಶಕ್ತಿಕೇಂದ್ರ'ವನ್ನು ಕಟ್ಟಿ ಅದರ ಕಾರ್ಯಾಧ್ಯಕ್ಷರಾಗಿ ಕನ್ನಡಪರ ಕೆಲಸಗಳನ್ನು ಮುನ್ನಡೆಸುತ್ತಿದ್ದಾರೆ. ಕನ್ನಡ ಚಳುವಳಿಯ ನಾಯಕರಾಗಿ ಅವರು ಮಾಡಿರುವ ಕೆಲಸ ಅಪಾರವಾದದ್ದು. ಕೆಲವೊಂದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಕರ್ನಾಟಕದಾದ್ಯಂತ ದೂರದರ್ಶನದಿಂದ ಕನ್ನಡ ಕಾರ್ಯಕ್ರಮಗಳನ್ನು ಬಿತ್ತರಗೊಳ್ಳುವುದು. ಎಸ್ಸೆಸ್ಸೆಲ್ಸಿವರೆಗೆ ಓದುವ ಕರ್ನಾಟಕದ ಎಲ್ಲ ವಿದ್ಯಾರ್ಥಿಗಳು ಐದು ವರ್ಷಗಳಾದರೂ ಕನ್ನಡವನ್ನು ಓದಲೇಬೇಕಾದ ಭಾಷಾ ಸೂತ್ರವನ್ನು ಸರಕಾರ ಜಾರಿಗೆ ತಂದದ್ದು, ಕನ್ನಡ ವಿಶ್ವವಿದ್ಯಾಲಯದ ಸ್ಥಾಪನೆ ಮುಂತಾದವುಗಳಲೆಲ್ಲ ಚಿದಾನಂದ ಮೂರ್ತಿಯವರ ಮತ್ತು ಕನ್ನಡ ಶಕ್ತಿಕೇಂದ್ರದ ಪಾತ್ರ ಇದೆ ಎಂಬುದನ್ನು ಮರೆಯುವಂತಿಲ್ಲ.

## ಕೃತಿಗಳ ಪರಿಚಯ

ಚಿದಾನಂದಮೂರ್ತಿಯವರ ಕೃತಿಗಳ ಹೆಸರುಗಳೇ ಅವರು ಬೇರೆ ಬೇರೆ ಕ್ಷೇತ್ರದಲ್ಲಿ ಕೆಲಸ ಮಾಡಿದ್ದಾರೆಂಬುದನ್ನು ತಿಳಿಸುತ್ತವೆ. ಅವುಗಳನ್ನು ನಾಲ್ಕು ಗುಂಪುಗಳನ್ನಾಗಿ ವರ್ಗೀಕರಿಸಬಹುದು. (೧) ಸಾಹಿತ್ಯ ಮತ್ತು ಶಾಸನ ಕ್ಷೇತ್ರ (೨) ಭಾಷಾವಿಜ್ಞಾನ (೩) ಜಾನಪದ ಶಾಸ್ತ್ರ (೪) ಛಂದಸ್‌ಶಾಸ್ತ್ರ. ಈ ಪ್ರಮುಖ ವಲಯಗಳಲ್ಲಿ ಅವರು ಮಹತ್ವಪೂರ್ಣ ಕೆಲಸ ಮಾಡಿದ್ದಾರೆ.

### ಸಾಹಿತ್ಯ ಮತ್ತು ಶಾಸನ ಕ್ಷೇತ್ರ

**ಸಂಶೋಧನ ತರಂಗ ಸಂಪುಟ-೧ (೧೯೬೬)**

ಚಿದಾನಂದಮೂರ್ತಿಯವರ ಸಂಶೋಧನಾ ಲೇಖನಗಳ ಪ್ರಥಮ ಸಂಕಲನ ಇದು. ಈ ಗ್ರಂಥದಲ್ಲಿ ಒಟ್ಟು ಹದಿನೆಂಟು ಸಂಪ್ರಬಂಧಗಳಿವೆ. ಅವು ಸಾಹಿತ್ಯ, ಭಾಷಾಶಾಸ್ತ್ರ, ಛಂದಸ್ಸು ಮತ್ತು ಸಂಸ್ಕೃತಿಗೆ ಸಂಬಂಧ ಪಟ್ಟಿವೆ.

'ಪಂಪಕವಿ ಮತ್ತು ಮೌಲ್ಯ ಪ್ರಸಾರ', 'ವಚನ ಸಾಹಿತ್ಯದ ಉಗಮ', 'ಉಗಾಭೋಗಗಳು ಮತ್ತು ವಚನಗಳು' ಮುಂತಾದ ಲೇಖನಗಳು ಸಾಹಿತ್ಯಕ್ಕೆ ಸಂಬಂಧಪಟ್ಟರೆ, 'ಅಮ್ಮ', 'ಅಬ್ಬೆ', 'ಅಲ್ಲಮ', 'ಬಾದುಬ್ಬೆ', 'ಉಂಬಳಿ ಅಥವಾ ಉಂಬಟಿ'? 'ಇಟಿ' ಧಾತುವನ್ನು ಕುರಿತ ಲೇಖನಗಳು ಭಾಷಾಶಾಸ್ತ್ರಕ್ಕೆ ಸಂಬಂಧ ಪಟ್ಟಿವೆ. 'ಚಂದ್ರರಾಜನ 'ಮದನ ತಿಲಕ' ದಲ್ಲಿ ಕೆಲವು ಕನ್ನಡ ವೃತ್ತಗಳು', 'ಲಯಗ್ರಾಹಿ ಮತ್ತು ಲಯೋತ್ತರ', 'ಬಸವಣ್ಣನವರ ವಚನಗಳಲ್ಲಿ ಛಂದೋಲಯ' 'ತ್ರಿಪದಿ: ಅದರ ಸ್ವರೂಪ ಮತ್ತು ಇತಿಹಾಸ ' ಛಂದಸ್‌ಶಾಸ್ತ್ರಕ್ಕೆ ಸಂಬಂಧಪಟ್ಟಿವೆ.

ಡಾ. ಎನ್. ಎಸ್ ತಾರಾನಾಥರ ಅಭಿಪ್ರಾಯ ಇಂತಿದೆ, "ಡಾ.ಚಿದಾನಂದಮೂರ್ತಿಗಳ ಅಂತರ್‌ಶಿಸ್ತೀಯ ಅಧ್ಯಯನ ಅವರ ಸಂಶೋಧನಾ ತರಂಗದ ಮೊದಲನೆಯ ಸಂಪುಟ ದಲ್ಲಿಯೇ ಆರಂಭಗೊಂಡಿದೆ. ಆ ಸಂಕಲನದ ' ಪಂಪ ಕವಿ ಮತ್ತು ಮೌಲ್ಯ ಪ್ರಸಾರ ' ಎಂಬ ಮೊದಲನೆಯ ಲೇಖನದಲ್ಲಿಯೇ ಇತಿಹಾಸದ ಒಂದು ಭಾಗವಾದ ಶಾಸನಗಳನ್ನು ಆಧರಿಸಿ ಪಂಪಭಾರತದ ಮತ್ತು ಪಂಪನ ಕಾಲದ ಮೌಲ್ಯಗಳನ್ನು ಅವರು ವಿವೇಚಿಸಿದ್ದಾರೆ. ಪಂಪ ಹೇಳುವ ನನ್ನಿ, ಬೀರ, ಚಾಗ ಮುಂತಾದ ಮೌಲ್ಯಗಳು ಆತನ ಕಾಲದ ಜನಜೀವನದಲ್ಲಿ ಹೇಗೆ ಹಾಸು ಹೊಕ್ಕಾಗಿದ್ದವು ಎಂಬುದನ್ನು ವಿಶದೀಕರಿಸಿದ್ದಾರೆ. ಸಾಹಿತ್ಯದ ಶಿಸ್ತಿಗೆ

ಇತಿಹಾಸದ ಶಿಸ್ತನ್ನು ಅಳವಡಿಸಿ ಪರಿಶೀಲಿಸುವ ಪ್ರಯತ್ನ ೧೯೬೦ರ ದಶಕದಲ್ಲಿ ಹೊಚ್ಚ ಹೊಸದಾಗಿತ್ತು. ಇಲ್ಲಿಯೇ ಕೌಳರನ್ನು ಕುರಿತು, ದಿವ್ಯ ಮುಂಡಿಗೆಗಳನ್ನು ಕುರಿತು ಬರೆದ ಎರಡು ಲೇಖನಗಳಿವೆ. ಈ ಲೇಖನಗಳಲ್ಲಿ ಅವರು ಕನ್ನಡ ಸಾಹಿತ್ಯ ಸಂಬಂಧವಾದ ಶೋಧಗಳನ್ನು ಗುರಿಯಾಗಿರಿಸಿಕೊಂಡಿಲ್ಲ, ಸಾಹಿತ್ಯಿಕ ಮತ್ತು ಶಾಸನಿಕ ಉಲ್ಲೇಖಗಳನ್ನು ಆಧರಿಸಿ ಪ್ರಾಚೀನ ಕರ್ನಾಟಕದಲ್ಲಿ ಪ್ರಚಲಿತವಾಗಿದ್ದ ಒಂದು ಶಾಕ್ತಮತ ಹಾಗೂ ವಿವಾದನಿರ್ಣಯ ವಿವಾದವೊಂದರ ಸ್ವರೂಪ, ವೈಶಿಷ್ಟ್ಯಗಳನ್ನು ವಿವರಿಸಿದ್ದಾರೆ. ಇಲ್ಲಿ ಸಾಹಿತ್ಯ ಮತ್ತು ಐತಿಹಾಸಿಕ ಶಿಸ್ತುಗಳ ಬೆಂಬಲದಿಂದ ಧರ್ಮ ಮತ್ತು ಸಂಸ್ಕೃತಿಗಳ ಶಿಸ್ತಿನ ವಿಷಯವೊಂದನ್ನು ಪೃಥಕ್ಕರಿಸಿದ್ದಾರೆ. ಜನಪದ ದೇವತೆಯಾದ ಜೋಕುಮಾರನ ಬಗೆಗೆ ಹಳಗನ್ನಡ ಸಾಹಿತ್ಯದಲ್ಲಿ ದೊರೆಯುವ ಉಲ್ಲೇಖಗಳನ್ನಾಧರಿಸಿ ಆತನ ಜನನ, ಜೀವನ, ಆಯುಸ್ಸಿನ ಸಂಗತಿ ಗಳನ್ನು ಕಲೆಹಾಕಿ ಹೊಸ ಪ್ರಪಂಚವೊಂದನ್ನು ತೋರಿಸಿದ್ದಾರೆ. ಇದು ಸಾಹಿತ್ಯ ಮತ್ತು ಜಾನಪದ ಶಿಸ್ತುಗಳನ್ನು ಸಮನ್ವಯಿಸಿಕೊಂಡು ಮಾಡಿರುವ ಅಧ್ಯಯನವಾಗಿದೆ.''

**ಸಂಶೋಧನ ತರಂಗ ಸಂಪುಟ-೨ (೧೯೭೦)**

ಈಗ್ರಂಥದಲ್ಲಿ ಮೂವತ್ತು ಸಂಪ್ರಬಂಧಗಳಿವೆ. ಅವು ಭಾಷೆ, ಸಾಹಿತ್ಯಮತ್ತು ಸಂಸ್ಕೃತಿಗೆ ಸಂಬಂಧಪಟ್ಟಿವೆ. 'ಭಾಷೆ' ಎಂಬ ವಿಭಾಗದಲ್ಲಿ ಭಾಷಾಶಾಸ್ತ್ರಕ್ಕೆ ಸಂಬಂಧಪಟ್ಟಂತೆ ಹತ್ತು ಸಂಪ್ರಬಂಧಗಳಿವೆ. ಮುನ್ನುಡಿ ಬರೆದ ಡಿ. ಎಲ್. ನರಸಿಂಹಚಾರ್ ಅವರ ಅಭಿಪ್ರಾಯಗಳನ್ನು ಸಂಗ್ರಹಿಸಿ ಹೇಳುತ್ತೇನೆ. 'ಲಂಬಾಣಿ ಜನ ಮತ್ತು ಅವರ ಭಾಷೆ' ಎಂಬ ಲೇಖನ ಆ ಜನರ ಜೀವನ ಚಿತ್ರವನ್ನು, ಅವರ ನಂಬಿಕೆಗಳನ್ನು, ಅವರ ಭಾಷೆಯ ಸ್ವರೂಪವನ್ನು ವಿಶದವಾಗಿ ತಿಳಿಸುತ್ತದೆ. ಅವರಾಡುವ ಭಾಷೆ ಇಂಡೋ ಆರ್ಯನ್ ಭಾಷಾ ವರ್ಗಕ್ಕೆ ಸೇರಿದ್ದು, ಇಂಥ ಒಂದು ಭಾಷೆಯನ್ನು ಆಡುವ ಜನ ಮದ್ರಾಸಿನ ಕೋಟೆಯ ಪರಿಸರದಲ್ಲಿ ಇಂದಿಗೂ ಇರುವುದೆಂದು ಪ್ರತೀತಿ ಇದೆ. 'ವ್ಯಾಕರಣಕಾರರು ಮತ್ತು ಸ್ವೀಕರಣ' ಎಂಬ ಲೇಖನದಲ್ಲಿ ಕನ್ನಡದಲ್ಲಿರುವ ಸಂಸ್ಕೃತ ಪ್ರಾಕೃತ ಜನ್ಯ ಶಬ್ದಗಳನ್ನು ಕುರಿತು ವಿವೇಚನೆ ನಡೆಸಿದ್ದಾರೆ. ಇದು ಸಮಗ್ರವಾಗಿರುವಂತೆ ತೋರುತ್ತದೆ. ಇದರಂತೆ ಕೇಳಿಕೆ ಪದದ ಅರ್ಥ ಮತ್ತು ನಿಷ್ಪತ್ತಿ, ಗೋದಾವರಿ ತೀರದ ಕನ್ನಡ ಮುಂತಾದ ಮಹತ್ವದ ಲೇಖನಗಳಿವೆ.

'ಸಾಹಿತ್ಯ' ಎಂಬ ವಿಭಾಗದಲ್ಲಿ ಹನ್ನೆರಡು ಸಂಪ್ರಬಂಧಗಳಿವೆ. ಡಿ. ಎಲ್.ಎನ್ ಅವರು ಅಭಿಪ್ರಾಯ ಪಡುವಂತೆ 'ಕಲ್ಯಾಣಿ ಚಾಲುಕ್ಯರ ಕಾಲದ ಕನ್ನಡ ಸಾಹಿತ್ಯ' ಎಂಬ ಪ್ರಬಂಧ ಸಾಹಿತ್ಯ ಚರಿತ್ರೆಗೆ ಸೇರಿದ್ದು. ಇಲ್ಲಿ ಹೇಳಿರುವ ಕವಿಗಳ ವಯಕ್ತಿಕ ಚರಿತ್ರೆಗಳು ಚಿರಪರಿಚಿತವಾದವು. ಕವಿಚರಿತಕಾರರ ಗ್ರಂಥವನ್ನು ನೋಡಿದವರಿಗೆ ಇಲ್ಲಿ ಹೊಸದೇನೂ ಕಾಣುವುದಿಲ್ಲ. ಆ ಕವಿಗಳು ರಚಿಸಿರುವ ಗ್ರಂಥಗಳಲ್ಲಿರುವ ವಸ್ತುವನ್ನು ಸಂಗ್ರಹವಾಗಿ ನಿರೂಪಿಸಿ, ಆ ಕೃತಿಗಳ ಬಗ್ಗೆ ವಿಮರ್ಶೆ ಮಾಡಿದರೆ ಈ ಪ್ರಬಂಧ ಸುಪುಷ್ಟವಾಗುತ್ತಿತ್ತು. 'ನಯಸೇನ-ಜಾನಪದ ಚಂಪೂಕವಿ' ಎಂಬ ಪ್ರಬಂಧದಲ್ಲಿ ಇಂಥ ಪುಷ್ಟಿ ಕಾಣುತ್ತದೆ.

'ಅಲ್ಲಮನ ಸಾಧಕ ಜೀವನ' ಲೇಖನ ಹೃದಯಸ್ಪರ್ಶಿಯಾಗಿದೆ. ಇದರಂತೆ ಶಂಕರ ಕವಿಯ ಪಂಚತಂತ್ರ, ಹರಿಹಲಕ್ಷೇತ್ರ ಮತ್ತು ಹರಿಹರ ಕವಿಯ ಕಾಲ ಮುಂತಾದ ಸಾಹಿತ್ಯಕ್ಕೆ ಸಂಬಂಧಪಟ್ಟ ಲೇಖನಗಳಿವೆ.

'ಸಂಸ್ಕೃತಿ' ಎಂಬ ವಿಭಾಗದಲ್ಲಿ ಸಂಸ್ಕೃತಿಗೆ ಸಂಬಂಧಪಟ್ಟಂತೆ ಎಂಟು ಸಂಪ್ರಬಂಧಗಳಿವೆ. ಡಿ.ಎಲ್.ಎನ್ ಅವರು ಹೇಳಿರುವಂತೆ 'ಮೈಲಾರ ಮತ್ತು ಮಾಳಚಿ' ಪ್ರಬಂಧವು ವಿಸ್ತಾರವಾಗಿದ್ದು ಹಲವು ನೂತನ ವಿಷಯಗಳ ಸಮಾವೇಶದಿಂದ ಪರಿಪೂರ್ಣವಾಗಿದೆ. 'ಪಾಳಿಧ್ವಜ' ಎಂಬ ಲೇಖನ ಆ ವಿಷಯವಾಗಿ ಮೊದಲ ಬಾರಿಗೆ ವಿವರಣೆಯನ್ನು ಕೊಟ್ಟ ಕೆ. ಬಿ. ಪಾಠಕ್ ಅವರ ಲೇಖನಕ್ಕಿಂತ ಹೆಚ್ಚು ವಿಷಯಗಳನ್ನೊಳಗೊಂಡಿದೆ. ಇದರಂತೆ ಎರಡು ವಾದ್ಯಗಳು ರಾವಣಹಸ್ತ ಮತ್ತು ಪಂಚಮುಖ ಶಾಸನೋಕ್ತ ಕೆಲವು ಮಹಾದಾನಗಳು ಮುಂತಾದ ಮಹತ್ವಪೂರ್ಣ ಲೇಖನಗಳಿವೆ.

ಡಿ.ಎಲ್.ಎನ್. ಅವರು ಹೇಳಿರುವಂತೆ "ಒಟ್ಟಿನಲ್ಲಿ ಲೇಖಕರ ಅನ್ವೇಷನ ದೃಷ್ಟಿ-ಬುದ್ಧಿ ಚಾತುರ್ಯ, ವಿಸ್ತಾರವಾದ ಗ್ರಂಥ ಪರಿಚಯ, ವಿಶದವಾದ ಪ್ರತಿಪಾದನೆ, ಸಮಸ್ಯೆಯೇ ಇಲ್ಲವೆಂದು ತೋರುವೆಡೆಯಲ್ಲಿ ಅದನ್ನು ಕಾಣುವುದು, ಕಂಡ ಮೇಲೆ ವಿಚಾರಕ್ಕೆ ತೊಡಗುವುದು ಇವೆ ಮುಂತಾದ ಅಂಶಗಳನ್ನು ಒಳಗೊಂಡಿರುವ ಸಂಶೋಧಕ ಮನೋಧರ್ಮ ಈ ಲೇಖನಗಳಲ್ಲಿ ಸುವ್ಯಕ್ತವಾಗಿದೆ."

**ಸಂಶೋಧನೆ(ಪ್ರ. ಮು. ೧೯೬೭ ದ್ವಿ. ಮು ೧೯೮೪)**

ಸಂಶೋಧನೆಯ ಕ್ಷೇತ್ರವನ್ನು ಹೊಸದಾಗಿ ಪ್ರವೇಶ ಮಾಡುವ ವಿದ್ಯಾರ್ಥಿಗಳಿಗೆ ಈ ಗ್ರಂಥ ಒಳ್ಳೆಯ ಕೈಪಿಡಿಯಾಗಿದೆ. ಸಂಶೋಧನೆಯ ಅರ್ಥ, ಉದ್ದೇಶ, ಸಂಶೋಧಕ ಸಮಸ್ಯೆಯನ್ನು ಆರಿಸಿಕೊಳ್ಳುವುದು, ವಿಷಯ ವಿಶ್ಲೇಷಣೆ, ಸಾಮಗ್ರಿ ಸಂಗ್ರಹ ಸಮಸ್ಯೆಯನ್ನು ಬಿಡಿಸುವುದು. ಬರವಣಿಗೆ, ಪ್ರಕಟನೆ ಮತ್ತು ಕನ್ನಡದಲ್ಲಿ ಸಂಶೋಧನೆಗೆ ಅವಕಾಶಗಳು ಈ ಎಲ್ಲ ವಿಷಯಗಳ ಬಗ್ಗೆ ಅಂದರೆ ಸಂಶೋಧನೆಯ ವಿಧಿ-ವಿಧಾನಗಳ ಬಗ್ಗೆ ತಾತ್ವಿಕ ಚಿಂತನೆ ಇಲ್ಲಿ ದೊರೆಯುತ್ತದೆ.

ಪ್ರೊ. ದೇ. ಜವರೇಗೌಡರು ಹೇಳಿರುವಂತೆ "ಈ ಪುಸ್ತಿಕೆ ಶುದ್ಧ ಅಥವಾ ವಸ್ತು ನಿಷ್ಠ ಸತ್ಯದ ಸಂಶೋಧನೆಯನ್ನು ವಿವೇಚಿಸುತ್ತದೆ. ಒಬ್ಬ ನಿಷ್ಠಾವಂತ ಮೇಧಾವಿಯ ಹತ್ತಾರು ವರ್ಷಗಳ ವ್ಯಾಸಂಗ-ಬೋಧನೆ-ಸಂಶೋಧನೆಗಳ ಫಲವಾಗಿ ಇದು ರೂಪ ತಾಳಿದೆ. ..........ಶ್ರೀಯುತರ ಸಂಶೋಧನೆಯ ನಿಷ್ಠೆಗೂ, ಪಾಂಡಿತ್ಯಕ್ಕೂ-ವಿವೇಚನಾ ಸಾಮರ್ಥ್ಯಕ್ಕೂ ಸಾಕ್ಷಿಯಾಗಿದೆ. ಇಂಥ ಗ್ರಂಥವನ್ನು ಕನ್ನಡದಲ್ಲಿ ಪ್ರಪ್ರಥಮವಾಗಿ ಬರೆದ ಶ್ರೇಯಸ್ಸಿಗೆ ಶ್ರೀ ಮೂರ್ತಿಯವರು ಪಾತ್ರರಾಗಿದ್ದಾರೆ."

**ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ(ಪ್ರ. ಮು. ೧೯೬೬ ದ್ವಿ. ಮು. ೧೯೭೯)**

ಚಿದಾನಂದಮೂರ್ತಿಯವರು ಮೈಸೂರು ವಿಶ್ವವಿದ್ಯಾಲಯಕ್ಕೆ ಒಪ್ಪಿಸಿದ ಪಿಎಚ್.ಡಿ. ನಿಬಂಧ ಇದಾಗಿದೆ. ಕ್ರಿ. ಶ. ೪೫೦ ರಿಂದ ೧೧೫೦ ರವರೆಗಿನ ಶಾಸನಗಳನ್ನು ತಮ್ಮ ಗ್ರಂಥ ರಚನೆಗೆ ಡಾ. ಮೂರ್ತಿಯವರು ಬಳಸಿಕೊಂಡಿದ್ದಾರೆ.

ಪ್ರಸ್ತುತ ಕೃತಿಯಲ್ಲಿ ಹದಿನಾಲ್ಕು ಅಧ್ಯಾಯಗಳಿವೆ. ಮೊದಲನೆಯ ಅಧ್ಯಾಯದಲ್ಲಿ ತಮ್ಮ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ಹೇಳಿದ್ದಾರೆ. 'ಶಾಸನಗಳು ಮತ್ತು ಅವುಗಳ ಅಧ್ಯಯನ' ಎಂಬ ಎರಡನೆಯ ಅಧ್ಯಾಯದಲ್ಲಿ ಶಾಸನಗಳೆಂದರೇನು? ಎಂಬುದರ ಬಗ್ಗೆ ಚರ್ಚಿಸಿ, ಬ್ರಾಹ್ಮಿಲಿಪಿಗೂ ಕನ್ನಡ ಲಿಪಿಗೂ ಇರುವ ಸಂಬಂಧ, ಕನ್ನಡ ಶಾಸನಗಳ ಅಧ್ಯಯನದ ಇತಿಹಾಸದ ಬಗ್ಗೆ ಚರ್ಚಿಸಿದ್ದಾರೆ, ಶಾಸನಗಳಲ್ಲಿ ವಿಷಯಾನು ಪೂರ್ವ ಎಂಬಲ್ಲಿ ಶಾಸನಗಳನ್ನು ಹಾಕಿಸುವ ಉದ್ದೇಶ, ಅವುಗಳನ್ನು ಬರೆಯಿಸಬೇಕಾದ ರೀತಿ, ಶಾಸನಗಳನ್ನು ಕೊರೆಯುತ್ತಿರುವ ಶಿಲ್ಪಿಗಳು ಮುಂತಾದ ವಿಷಯಗಳನ್ನು ವಿವರಿಸಿದ್ದಾರೆ.

ಮುಂದಿನ ನಾಲ್ಕು ಅಧ್ಯಾಯಗಳಲ್ಲಿ ಜೈನ, ಬೌದ್ಧ, ಶೈವ, ಮತ್ತು ವೈಷ್ಣವ ಧರ್ಮಗಳ ಉದಯ, ತತ್ವಗಳು, ಪಂಗಡಗಳು, ಕರ್ನಾಟಕದಲ್ಲಿ ಅವುಗಳ ಬೆಳವಣಿಗೆ ಮತ್ತು ಅವನತಿ ಎಲ್ಲ ಅಂಶಗಳನ್ನು ಚರ್ಚಿಸಿದ್ದಾರೆ. ನಂತರದ ಅಧ್ಯಾಯಗಳಲ್ಲಿ ದೇವಸ್ಥಾನದ ಪ್ರಾಚೀನತೆಯನ್ನು ಹೇಳಿ, ವಿದ್ಯಾಕೇಂದ್ರಗಳಾಗಿ, ನ್ಯಾಯಾಲಯಗಳಾಗಿ ದೇವಸ್ಥಾನಗಳು ವಹಿಸಿದ ಪಾತ್ರವನ್ನು ವಿವೇಚನೆ ಮಾಡಿದ್ದಾರೆ. ಒಂಬತ್ತನೆಯ ಅಧ್ಯಾಯದಲ್ಲಿ ಪ್ರಾಚೀನ ವಿದ್ಯಾಭ್ಯಾಸದ ಕೇಂದ್ರಗಳು ಅಗ್ರಹಾರ, ಬ್ರಹ್ಮಪುರಿ ಮುಂತಾದ ಅಂಶಗಳನ್ನು ವಿವರಿಸಿದ್ದಾರೆ. ಕೊನೆಯ ಐದು ಅಧ್ಯಾಯಗಳಲ್ಲಿ ಯುದ್ಧ ಕಲೆ- ಆತ್ಮ ಬಲಿಯ ಹಲವು ಪ್ರಕಾರಗಳು, ಆಡಳಿತ ವ್ಯವಸ್ಥೆ, ಆರ್ಥಿಕ ವ್ಯವಸ್ಥೆ ಮತ್ತು ಸಾಮಾಜಿಕ ವ್ಯವಸ್ಥೆಗಳ ಬಗ್ಗೆ ಹೇಳಿದ್ದಾರೆ. ಪ್ರಸ್ತುತ ಕೃತಿಯಲ್ಲಿ ಡಾ. ಚಿದಾನಂದಮೂರ್ತಿಯವರು ಪ್ರಾಚೀನ ಸಾಹಿತ್ಯ ಮತ್ತು ಶಾಸನಗಳಲ್ಲಿ ಕಂಡು ಬರುವ ಕನ್ನಡ ಸಂಸ್ಕೃತಿಯ ವಿವಿಧ ಮುಖಗಳನ್ನು ವಿವರವಾಗಿ ವಿವರಿಸಿದ್ದಾರೆ.

**ಈ ಗ್ರಂಥದ ಬಗ್ಗೆ ಕೆಲವು ವಿದ್ವಾಂಸರು ಅಭಿಪ್ರಾಯಗಳು ಇಂತಿವೆ.**

"ಮೊಟ್ಟ ಮೊದಲನೆಯ ಬಾರಿಗೆ ಕನ್ನಡ ಶಾಸನಗಳನ್ನು ಕುರಿತು ಸಾಂಸ್ಕೃತಿಕ ಅಧ್ಯಯನ ಕನ್ನಡದಲ್ಲಿ ಹೊರಬರುತ್ತಿದೆ. ಇಂಥ ಅಧ್ಯಯನ ಇತರ ಭಾರತೀಯ ಭಾಷೆಯಲ್ಲಿ ನಡೆದಿಲ್ಲವೆಂದೇ ಹೇಳಬಹುದು. ಇದರಿಂದ ಮತ, ಧರ್ಮ, ಆಡಳಿತ ವ್ಯವಸ್ಥೆ, ವಿದ್ಯಾಭ್ಯಾಸ, ಸಾಮಾಜಿಕ ವ್ಯವಸ್ಥೆ ಮೊದಲಾದ ಹಲವಾರು ವಿಷಯಗಳ ಮೇಲೆ ಹೊಸ ಬೆಳಕು ಚೆಲ್ಲಿದಂತಾಗಿದೆ. ಇದೊಂದು ಸಂಸ್ಕೃತಿಯ ವಿಶ್ವಕೋಶ. ಶಾಸನಗಳ ಗರ್ಭದಲ್ಲಿ ಬೆಳಕು

ಕಾಣದೆ ಹೋಗಿದ್ದ ಅಮೂಲ್ಯರತ್ನಗಳನ್ನು ಹೊರತೆಗೆದು ಕನ್ನಡ ನಾಡಿನ ಚರಿತ್ರೆಗೆ ಮಾತ್ರವಲ್ಲ ಭಾರತೀಯ ಇತಿಹಾಸಕ್ಕೆ ಮಹೋಪಕಾರ ಮಾಡಿದ್ದಾರೆ. ಈ ಕೃತಿ ಡಾ. ಚಿದಾನಂದಮೂರ್ತಿಯವರ ನಿರ್ದುಷ್ಟವಾದ ಪಾಂಡಿತ್ಯಕ್ಕೂ, ಸತ್ಯನಿಷ್ಠೆಗೂ, ಪ್ರಖರ ಪ್ರತಿಭೆಗೂ, ತಲಸ್ಪರ್ಶಿಯವಾದ ವೈಚಾರಿಕ ಸಾಮರ್ಥ್ಯಕ್ಕೂ ನಿದರ್ಶನವಾಗಿದೆ."

–ಪ್ರೊ. ದೇ. ಜವರೇಗೌಡ

"………ಶಾಸನಗಳಿಂದ ರಾಜಕೀಯೇತರ ವಿಷಯಗಳನ್ನು ಸ್ಫೋಟಗೊಳಿಸುವ ಕ್ರಿಯೆ ಇಲ್ಲಿಂದ ಪ್ರಾರಂಭವಾಯಿತು. ಈ ಹೊಸ ದಾರಿಗೆ ಅವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಅನೇಕ ದೃಷ್ಟಿಯಿಂದ ಮೈಲುಗಲ್ಲಾಯಿತು. ಈ ಗ್ರಂಥದ ಆದರ್ಶದಲ್ಲಿ ಮುಂದಿನ ತಲೆಮಾರಿನ ಕನ್ನಡ ಅಧ್ಯಾಪಕರು ರಾಜಕೀಯೇತರ ವಿಷಯ ಶೋಧಕ್ಕಾಗಿ ಶಾಸನಗಳನ್ನು ಅಭ್ಯಸಿಸಲು ಪ್ರಾರಂಭಿಸಿದರು. ಇತಿಹಾಸದವರಿಗಿಂತ ಭಿನ್ನವಾದ ಆಯಾಮವನ್ನು ಶಾಸನ ಲೋಕದಲ್ಲಿ ತೆರೆದರು".

– ಡಾ. ಎಂ. ಎಂ. ಕಲಬುರ್ಗಿ

"ದಾಖಲೆಯಾಧಾರಿತ ಸಂಶೋಧನೆಗೆ ಡಾ. ಮೂರ್ತಿಗಳ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಒಂದು ಸಮರ್ಥ ನಿದರ್ಶನ. ಅವರು ಇಲ್ಲಿ ಸಂಗ್ರಹಿಸಿರುವ ಮಾಹಿತಿ ಯಾರನ್ನೂ ದಂಗುಬಡಿಸುವಂಥದ್ದು, ಸಂಗ್ರಹಿಸುವ ಮಾಹಿತಿಯನ್ನು ವ್ಯವಸ್ಥಿತವಾಗಿ ವರ್ಗೀಕರಿಸಿ ಬಳಸಿಕೊಂಡಿರುವ ವಿಧಾನ ಮೆಚ್ಚುಗೆಗೆ ಪಾತ್ರವಾಗುವಂಥದ್ದು. ಪ್ರಾಚೀನ ಕರ್ನಾಟಕದ ಧರ್ಮ, ಸಮಾಜ, ಅರ್ಥವ್ಯವಸ್ಥೆ, ಸ್ತ್ರೀಯರ ಸ್ಥಾನಮಾನ ಕುರಿತು ಮೂರ್ತಿಗಳ ವಿಶ್ಲೇಷಣೆ ಉಪಾದೇಯವಾದದ್ದು. ಇದರಿಂದಲೇ ಇದೊಂದು ಆಕರ ಗ್ರಂಥವಾಗಿ ಪರಿಣಮಿಸಿದೆ."

–ಡಾ. ಎನ್.ಎಸ್. ತಾರಾನಾಥ

"ಕನ್ನಡ ಸಾಹಿತ್ಯವನ್ನು ಅಂತರ್‌ಶಿಸ್ತು ಅಧ್ಯಯನಕ್ಕೆ ಒಳಪಡಿಸಿ ಸಾಹಿತ್ಯ ಕೃತಿಗಳನ್ನು ಬೇರೊಂದು ರೀತಿಯಲ್ಲಿ ನೋಡುವ ಮೊದಲ ಪ್ರಯತ್ನ ಡಾ. ಚಿದಾನಂತಮೂರ್ತಿಯವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ'ದ ಮೂಲಕ ಪ್ರಾರಂಭವಾಯಿತೆಂದರೆ ಅತಿಶಯೋಕ್ತಿಯಾಗಲಾರದು. ಅದುವರೆಗೆ ಇತಿಹಾಸಕಾರರು ಕ್ವಚಿತ್ತಾಗಿ ನಡೆಯಿಸಿದ್ದ ಕರ್ನಾಟಕದ ಸಂಸ್ಕೃತಿಯ ಅಧ್ಯಯನವನ್ನು ಡಾ. ಮೂರ್ತಿಯವರು ಕನ್ನಡ ಶಾಸನಗಳನ್ನು ಆಧರಿಸಿ ವ್ಯಾಪಕವಾಗಿ ನಡೆಯಿಸಿ ಕನ್ನಡ ಸಾಹಿತ್ಯ, ಇತಿಹಾಸ ವಿದ್ಯಾರ್ಥಿಗಳಿಗೆ ನಂಟು

ಬೆಳೆಸಿದವರಲ್ಲಿ ಮೊದಲಿಗರೆನಿಸಿದರು. ನಾಡಿನ ಸಾಂಸ್ಕೃತಿಕ ಅಧ್ಯಯನವನ್ನು ಶಾಸನ ಮತ್ತು ಸಾಹಿತ್ಯ ಕೃತಿಗಳ ಮೂಲಕ ಅಧ್ಯಯನ ಮಾಡಿರುವುದು ನನಗೆ ತಿಳಿದಂತೆ ಕನ್ನಡ ಭಾಷೆಯೊಂದರಲ್ಲಿಯೇ. ಇದು ಕೇವಲ ಕೃತಿ ಮಾತ್ರವಲ್ಲದೆ ಮುಂದಿನ ಯುವ ಪೀಳಿಗೆಗೆ ಸಂಶೋಧನಾ ಕ್ಷೇತ್ರದ ಬೇರೆ ಬೇರೆ ಆಯಾಮಗಳನ್ನು ತಿಳಿಸುತ್ತದೆ.''

**–ಡಾ. ಆರ್. ಶೇಷಶಾಸ್ತ್ರಿ**

ಕನ್ನಡದ ಶ್ರೇಷ್ಠ ಮಟ್ಟದ ನಿಬಂಧಗಳ ಮಾಲಿಕೆಯಲ್ಲಿ ಇದು ಒಂದಾಗಿದೆ. ಡಿ.ಎಲ್.ಎನ್. ಅವರು ಈ ಪ್ರಬಂಧವನ್ನು ಓದಿ 'ಪಿಎಚ್.ಡಿ. ನಿಬಂಧವೆಂದರೆ ಹೀಗಿರಬೇಕು' ಎಂದು ಉದ್ಗಾರ ತೆಗೆದ ಮಾತು ತುಂಬ ಅಮೂಲ್ಯವಾದುದು. ತೀ.ನಂ.ಶ್ರೀ, ಡಿ.ಎಲ್.ಎನ್. ಕುವೆಂಪುರಂತಹ ಮಹಾವಿದ್ವಾಂಸರು ಮೆಚ್ಚಿದರೆಂದರೆ ಈ ಪ್ರಬಂಧದ ಗುಣಮಟ್ಟದ ಬಗ್ಗೆ ಬೇರೆ ಹೇಳಬೇಕಾಗಿಲ್ಲ.

**ಕನ್ನಡ ಸಾಹಿತ್ಯ ಶಾಸನಗಳಲ್ಲಿ ಸಂಗೀತ ವಿಚಾರ (೧೯೮೪)**

ಬೆಂಗಳೂರು ವಿಶ್ವವಿದ್ಯಾಲಯದ ಪ್ರಚಾರೋಪನ್ಯಾಸ ಮಾಲೆಯಲ್ಲಿ ಪ್ರಕಟಗೊಂಡ ಪುಸ್ತಕವಿದು. ಇದರಲ್ಲಿ ಕನ್ನಡ ಕಾವ್ಯ ಮತ್ತು ಶಾಸನಗಳಲ್ಲಿ ಬಂದಿರುವ ಹಲವಾರು ಸಂಗೀತ ವಿಚಾರಗಳು ಇಲ್ಲಿ ಅಡಕವಾಗಿವೆ.

ಸಂಗೀತ ಗೋಷ್ಠಿ, ವಾದಕರು (ಗಾಯಕರು), ವಾದ್ಯಗಳು, ಅವುಗಳಿಂದ ಹೊರ ಹೊಮ್ಮುವ ತಾಳಗಳನ್ನು ಡಾ. ಚಿದಾನಂದಮೂರ್ತಿಯವರು ಪಟ್ಟಿ ಮಾಡುತ್ತಾರೆ. ನಿಜಗುಣ ಶಿವಯೋಗಿಗಳ ವಿವೇಕ ಚಿಂತಾಮಣಿಯಲ್ಲಿರುವ ಸಂಗೀತಕ್ಕೆ ಸಂಬಂಧಿಸಿದ ಸಂಗತಿಗಳನ್ನು ಸಂಗೀತಗಾರರ ಗಮನಕ್ಕೆ ತಂದಿದ್ದಾರೆ. ಅದರಂತೆ 'ರಾವಣಹಸ್ತ' (ತಂತಿವಾದ್ಯ) ಮತ್ತು 'ಪಂಚಮುಖ' (ಚರ್ಮವಾದ್ಯ) ಈ ಎರಡು ವಾದ್ಯಗಳಿಗೆ ಸಂಬಂಧಿಸಿದ ಹೊಸ ಸಂಗತಿಗಳನ್ನು ತಿಳಿಸಿದ್ದಾರೆ. ಕನ್ನಡ ಕಾವ್ಯ ಶಾಸನಗಳಲ್ಲಿರುವ ಸಂಗೀತ ವಿಚಾರಗಳ ಸಾಮಗ್ರಿಯನ್ನು ಚಿದಾನಂದಮೂರ್ತಿ ಯವರು ಕೊಟ್ಟಿದ್ದಾರೆ.

**ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು (೧೯೮೪)**

ಚಿದಾನಂದಮೂರ್ತಿಯವರು ಈ ಕೃತಿಯಲ್ಲಿ ವೀರಗಲ್ಲು ಮತ್ತು ಮಾಸ್ತಿಕಲ್ಲು ಗಳ ಪರಿಚಯ ಮಾಡಿ ಕೊಟ್ಟಿದ್ದಾರೆ. 'ತಮ್ಮ ಐಶ್ವರ್ಯಕ್ಕಿಂತ ದೇಹ-ಪ್ರಾಣಗಳನ್ನು ಸ್ವಸಂತೋಷದಿಂದ ತ್ಯಾಗ ಮಾಡಿದವರ ವಿಷಯವನ್ನು ವೀರಗಲ್ಲುಗಳು, ಮಾಸ್ತಿಕಲ್ಲುಗಳು

ತಿಳಿಸುತ್ತವೆ. ......ಇವು ಒಂದೆ ಬಗೆಯ ಸ್ಮಾರಕಗಳು.... .ಎರಡರ ಮೂಲದಲ್ಲಿಯೂ ಕೃತಜ್ಞತೆ, ಸ್ವಾಮಿನಿಷ್ಠೆ, ಅನುಪಮ ತ್ಯಾಗ ಇವೆ' ಎಂಬ ಚಿದಾನಂದಮೂರ್ತಿಯವರ ಮಾತುಗಳು ಗಮನಾರ್ಹವಾಗಿವೆ.

ವೀರಗಲ್ಲುಗಳನ್ನು ವಿಷಯದ ದೃಷ್ಟಿಯಿಂದ ಸ್ಥೂಲವಾಗಿ ಐದು ರೀತಿಯಲ್ಲಿ ವರ್ಗೀಕರಿಸಿದ್ದಾರೆ. ರಾಜನ ಪರವಾಗಿ ಹೋರಾಡಿ ಮಡಿದವರ ಸ್ಮಾರಕಗಳು, ತುರುಗೋಳಿನಲ್ಲಿ ಸತ್ತವರ ಸ್ಮಾರಕಗಳು, ಸ್ತ್ರೀಯರ ಮಾನಭಂಗ ನೋಡಲಾರದೆ ಮಡಿದವರ ಸ್ಮಾರಕಗಳು, ಬೇಟೆಯ ವೀರಗಲ್ಲುಗಳು ಮತ್ತು ವೇಳೆ ವಾಳಿ ಅಥವಾ ಗರುಡ ವೀರಗಲ್ಲುಗಳು. ಪುಸ್ತಕದ ಮಧ್ಯಮಧ್ಯದಲ್ಲಿರುವ ಆಕರ್ಷಕ ಚಿತ್ರಗಳು ಓದುಗರಿಗೆ ತುಂಬ ಉಪಯುಕ್ತವಾಗಿವೆ. ಸರಳ ಪರಿಚಯಾತ್ಮಕ ಶೈಲಿಯಲ್ಲಿ ವಿಷಯ ಪ್ರತಿಪಾದನೆ ಇದೆ.

**ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ (೧೯೮೫)**

ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದ ಆಶ್ರಯದಲ್ಲಿ ಕೊಟ್ಟ ಮೂರು ವಿಶೇಷ ಉಪನ್ಯಾಸಗಳು ಇಲ್ಲಿವೆ. ಕನ್ನಡ ಸಾಹಿತ್ಯದಲ್ಲಿ ಅಸ್ಪೃಶ್ಯತೆಯನ್ನು ಕುರಿತಂತೆ ಅಧಿಕೃತವಾಗಿ ಹೇಳುವ ಮೊದಲ ಗ್ರಂಥ ಇದಾಗಿದೆ.

ಈ ಗ್ರಂಥದಲ್ಲಿ ಪ್ರಾಚೀನ ಎಂದರೆ ಆಧುನಿಕ ಪೂರ್ವ ಕರ್ನಾಟಕದಲ್ಲಿ ಅಸ್ಪೃಶ್ಯತೆಯ ಸಮಸ್ಯೆ ಎಷ್ಟು ತೀವ್ರವಾಗಿತ್ತು, ಅದರ ಸ್ವರೂಪವೇನು, ಅಸ್ಪೃಶ್ಯದ ಬದುಕಿನ ರೀತಿ ಹೇಗೆ, ಅವರನ್ನು ಸಮಾಜ ನಡೆಸುವ ಬಗೆ ಏನು, ವಚನಕಾರರ ಚಳುವಳಿಯಲ್ಲಿ ಅಸ್ಪೃಶ್ಯ ಶಿವ ಭಕ್ತರು ವಹಿಸಿದ ಪಾತ್ರ ಎಂತಹದು, ಆ ಚಳುವಳಿಯಿಂದ ಅಸ್ಪೃಶ್ಯರ ಬದುಕಿನಲ್ಲಿ ಏನಾದರೂ ಮಾರ್ಪಾಟು ಕಾಣಿಸಿತೇ- ಆ ಚಳುವಳಿಯ ಗುಣ ಏನು, ಇತಿಮಿತಿಗಳೇನು, ವಚನಗಳಲ್ಲದೆ ಚಂಪುಕಾವ್ಯ, ಶಾಸನಗಳು, ಷಟ್ಪದಿ, ರಗಳೆ ಮೊದಲಾದ ಕಾವ್ಯಗಳಲ್ಲಿ ದೊರಕುವ ಸಾಮಗ್ರಿ ಸ್ವರೂಪವೆಂತಹುದು ಇವೆ ಮೊದಲಾದ ಸಂಗತಿ, ಚರ್ಚೆ. ವ್ಯಾಖ್ಯಾನಗಳನ್ನು ಒಳಗೊಂಡ ಕೃತಿಯಿದು.

ಮಧ್ಯಕಾಲೀನ ಸಾಹಿತ್ಯವನ್ನು ಮುಖ್ಯವಾಗಿ ಲಕ್ಷಿಸಿದ್ದರೂ ಅದಕ್ಕಿಂತ ಹಿಂದಿನ ಚಂಪು ಕಾವ್ಯಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ ಮತ್ತು ಕ್ರಿ.ಶ. ೧೮೦೦ರ ವರೆಗಿನ ಕನ್ನಡ ಕೃತಿಗಳಲ್ಲಿ ಬಂದಿರುವ ಅಸ್ಪೃಶ್ಯತೆಯನ್ನು ಕುರಿತ ಸಾಮಗ್ರಿಗಳನ್ನು ಅನುಬಂಧವಾಗಿ ಕೊಟ್ಟಿದ್ದಾರೆ. ಸಮಾಜದ ರಚನೆ, ಬದಲಾವಣೆಗಳನ್ನು ಎಚ್ಚರಿಕೆಯಿಂದ ಗುರುತಿಸುವ ಸಂಶೋಧಕರ ಒಳನೋಟಗಳನ್ನು ಹೊಂದಿರುವ ವ್ಯಾಖ್ಯಾನ ಗ್ರಂಥವೂ ಇದಾಗಿದೆ.

**ಕನ್ನಡ ಸಂಸ್ಕೃತಿ : ನಮ್ಮ ಹೆಮ್ಮೆ (ಪ್ರ. ಮು. ೧೯೮೭ ದ್ವಿ. ಮು. ೧೯೮೯)**

ಸಾಹಿತಿ-ಕಲಾವಿದರ ಬಳಗದಿಂದ ಪ್ರಕಟಗೊಂಡ ಪುಸ್ತಕವಿದು. ಇದರಲ್ಲಿ ಕನ್ನಡಿಗರ ಸ್ವಾಭಿಮಾನ ಮತ್ತು ಸಮನ್ವಯ ಸಂಸ್ಕೃತಿಯ ಬಗ್ಗೆ ಹಲವಾರು ಅಂಶಗಳಿವೆ. ಅಂದರೆ

ಅರಸುಮನೆತನಗಳು, ಕವಿಗಳು, ವಚನಕಾರರು, ಭಾಷೆ, ಸಾಹಿತ್ಯ, ಸಂಗೀತ, ಚಿತ್ರಕಲೆ, ಕಲೆ, ವಾಸ್ತುಶಿಲ್ಪ ಮುಂತಾದ ಅಂಶಗಳು ಇಲ್ಲಿ ಸಮಾವೇಶಗೊಳ್ಳುತ್ತವೆ.

ಈ ಕೃತಿ ಕನ್ನಡ ಸಂಸ್ಕೃತಿಯನ್ನು ಸಂಕ್ಷಿಪ್ತವಾಗಿ ಪರಿಚಯಿಸಿ ಕೊಡುತ್ತದೆ. ಕನ್ನಡ ಸಂಸ್ಕೃತಿಯ ಬಗ್ಗೆ ಪ್ರೀತಿ- ಅಭಿಮಾನಗಳನ್ನು ಮೂಡಿಸುವ ಶೈಲಿಯಲ್ಲಿದೆ.

**ಕರ್ನಾಟಕ ಸಂಸ್ಕೃತಿ(೧೯೯೧)**

ಪದವಿ ಪೂರ್ವ ತರಗತಿಯ ಐಚ್ಛಿಕ ಕನ್ನಡ ವಿದ್ಯಾರ್ಥಿಗಳ ಪಠ್ಯಕ್ಕಾಗಿ ಸಿದ್ಧ ಪಡಿಸಿದ ಹೊತ್ತಿಗೆ ಇದು. ಕರ್ನಾಟಕ ಸಂಸ್ಕೃತಿಯ ಬಗ್ಗೆ ಸಂಕ್ಷಿಪ್ತ ಪರಿಚಯ ಮಾಡಿಕೊಟ್ಟಿದ್ದಾರೆ. ಕರ್ನಾಟಕದ ಹೆಸರು ಮತ್ತು ಅದರ ಪ್ರಾಚೀನತೆ, ಇತಿಹಾಸ ಪೂರ್ವಯುಗ, ಕನ್ನಡ ಭಾಷೆ-ಸಾಹಿತ್ಯಗಳ ಪ್ರಾಚೀನತೆ, ಕರ್ನಾಟಕದ ಅರಸು ಮನೆತನಗಳು, ಪ್ರಮುಖ ಸಾಂಸ್ಕೃತಿಕ ಕೇಂದ್ರಗಳು, ಕರ್ನಾಟಕದ ಕಲೆ, ಸಾಹಿತ್ಯ, ಶಿಲ್ಪ, ಸಂಗೀತ ಈ ಎಲ್ಲ ಅಂಶಗಳನ್ನು ಸರಳವಾಗಿ, ಸಂಕ್ಷಿಪ್ತವಾಗಿ ಖಚಿತ ವಿವರಗಳೊಂದಿಗೆ ಚಿದಾನಂದಮೂರ್ತಿಯವರು ಕರ್ನಾಟಕದ ಸಂಸ್ಕೃತಿಯನ್ನು ಪರಿಚಯಿಸಿದ್ದಾರೆ.

**ಹೊಸತು ಹೊಸತು (೧೯೯೩)**

ಕನ್ನಡ ಸಾಹಿತ್ಯ, ಚರಿತ್ರೆ, ಶಾಸನ ಮತ್ತು ಸಂಸ್ಕೃತಿಗೆ ಸಂಬಂಧಪಟ್ಟಂತೆ ಐವತ್ತು ಸಂಪ್ರಬಂಧಗಳ ಸಂಕಲವಿದು. 'ಕವಿರಾಜಮಾರ್ಗಕ್ಕೆಹಿಂದಿನ ಕನ್ನಡ ಸಾಹಿತ್ಯ' ಇಲ್ಲಿ ಮೊದಲ ಸಂಪ್ರಬಂಧವಾಗಿದೆ. ಉಪಲಬ್ಧವಿರುವ ಸಾಮಗ್ರಿಗಳನ್ನು ಬಳಸಿಕೊಂಡು ಖಚಿತವಾದ ಒಂದು ಚಿತ್ರಣವನ್ನು ನೀಡುತ್ತದೆ. ಪ್ರಾಚೀನ ಕನ್ನಡ ಸಾಹಿತ್ಯದ ಆರಂಭ ಕಾಲವನ್ನು ಖಚಿತವಾಗಿ ಹೇಳುವ ಪ್ರಯತ್ನ ಇಲ್ಲಿದೆ. ಪಂಪ ಕವಿಯ ಕೃತಿಗಳು ಮತ್ತು ಶಾಸನಗಳ ಬಗ್ಗೆ ಏಳು ಸಂಪ್ರಬಂಧಗಳಿವೆ.

'ಶ್ರವಣ ಬೆಳ್ಗೊಳಕ್ಕೆ ಮೂಲ' 'ಹಳೆಯ ಬೆಳ್ಗೊಳ' ಎಂಬ ಲೇಖನದಲ್ಲಿ ಶ್ರವಣ ಬೆಳ್ಗೊಳದ ಸ್ಥಳನಾಮದ ಬಗ್ಗೆ ವಿಶ್ಲೇಷಣೆ ಮಾಡುತ್ತಾ ನಂತರ ಆ ಸ್ಥಳದ ಸಾಂಸ್ಕೃತಿಕ ಮಹತ್ವವನ್ನು ವಿವರಿಸಿದ್ದಾರೆ. 'ಹಂಪೆಯಲ್ಲಿ ಹರಿಹರ ಮತ್ತು ಚಾಮರಸರ ವಾಸಸ್ಥಾನಗಳ ಶೋಧ', 'ಮುಮ್ಮಖ ತೀರ್ಥ' ಮತ್ತು ಹಂಪೆಯ ಹರಿಹರನ ಹೂದೋಟ ಒಂದು ಅಭಿಜ್ಞೆ 'ಪಂಪಾಪುರ'(ಹಂಪೆ) ಕೆಲವು ಅಭಿಜ್ಞೆಗಳು, ಹಂಪೆಯ ಪೂರ್ವ ಇತಿಹಾಸವನ್ನು ತಿಳಿದುಕೊಳ್ಳಲಿಕ್ಕೆ ಚರಿತ್ರೆಕಾರರಿಗೆ ತುಂಬ ಉಪಯುಕ್ತ ಮಾಹಿತಿಯನ್ನು ಒದಗಿಸಿ ಕೊಡುತ್ತದೆ. ಡಾ. ಮೂರ್ತಿಯವರು ಕ್ಷೇತ್ರಕಾರ್ಯ ಕೈಗೊಂಡು ಹೊಸ ಹೊಸ ಅಂಶ ಗಳನ್ನು ಬೆಳಕಿಗೆ ತಂದಿದ್ದಾರೆ.

'ಚಿತ್ರದುರ್ಗ'ದ ಸ್ಥಳನಾಮದ ಬಗ್ಗೆ 'ಮುಕ್ತಾಯಕ್ಕನ' ವ್ಯಕ್ತಿನಾಮದ ಬಗ್ಗೆ ಡಾ. ಚಿದಾನಂದಮೂರ್ತಿಯವರು ಐತಿಹಾಸಿಕ ಭಾಷಾವಿಜ್ಞಾನದ ಹಿನ್ನೆಲೆಯಲ್ಲಿ ವಿಶ್ಲೇಷಿಸಿ ಖಚಿತ ನಿರ್ಣಯಕ್ಕೆ ಬಂದಿದ್ದಾರೆ. 'ಜನಿವಾರ' ಮತ್ತು 'ಸಂಬಲಗೋಲು' ಪದಗಳ

ನಿಷ್ಪತ್ತಿಗಳನ್ನು ಹೇಳುವಾಗ ಅವುಗಳ ಪ್ರಸಾರವನ್ನು ಪತ್ತೆ ಹಚ್ಚಲು ಕಾಲಾತೀತ, ದೇಶಾತೀತವಾಗಿ ಹೋಗಿ ಆ ರೂಪಗಳ ಪ್ರಾಚೀನ ಪ್ರಯೋಗಗಳನ್ನು ಕಾಲಾನುಕ್ರಮದಲ್ಲಿ ಉಲ್ಲೇಖಿಸುತ್ತಾರೆ. ಇಲ್ಲಿ ಸಂಸ್ಕೃತಿ ಶೋಧವೇ ಅವರಿಗೆ ಮುಖ್ಯವಾಗಿದೆ.

'ಗ್ರಾಮದೇವತೆ' - 'ಗ್ರಾಮ್ಯದೇವತೆ', 'ಹರಿಕಥೆಯ ಉಗಮ' ,'ವಿವಾಹ ಪುರಾಣ' 'ಕನ್ನಡದ ಅತ್ಯಂತ ಪ್ರಾಚೀನ ಶಾಸನಸ್ಥ ಜಾನಪದ ಕೃತಿ'. 'ಬಾದುಬ್ಬೆ-ಬಾದಮಯ್ಯ-ಬಣಶಂಕರಿ ಪೆಟ್ಟಿಗೆ, ಲಜ್ಜಾಗೌರಿ, ಮುಂತಾದವು ಜಾನಪದ ಶಾಸ್ತ್ರಕ್ಕೆ ಸಂಬಂಧಪಟ್ಟ ಸಂಪ್ರಬಂಧಗಳಾಗಿವೆ. ಅವರ ಈ ಸಂಪ್ರಬಂಧಗಳಲ್ಲಿ ಇತಿಹಾಸ, ಶಾಸನ, ಸಾಹಿತ್ಯ ಮತ್ತು ಜಾನಪದದ ಶಿಸ್ತನ್ನು ಅನ್ವಯಿಸಿ ವಿವರಿಸುವ ಪ್ರಯತ್ನ ಕಂಡು ಬರುತ್ತದೆ.

ಪ್ರಸ್ತುತ ಕೃತಿಯ ಬಗ್ಗೆ ಡಾ. ಕೆ. ವಿ. ನಾರಾಯಣರು ಈ ರೀತಿಯಾಗಿ ಅಭಿಪ್ರಾಯ ಪಟ್ಟಿದ್ದಾರೆ. 'ಕನ್ನಡ ಅಧ್ಯಯನ ಕ್ಷೇತ್ರದಲ್ಲಿ ಬಳಕೆಯಲ್ಲಿರುವ ಪುನಾರಚನೆಯ ಮಾದರಿಗೆ ಡಾ. ಎಂ. ಚಿದಾನಂದಮೂರ್ತಿಯವರ ಸಂಪ್ರಬಂಧ ಗಳು ಅತ್ಯುತ್ತಮ ನಿದರ್ಶನಗಳು 'ಹೊಸತು-ಹೊಸತು' ಸಂಕಲನದ ಪ್ರತಿಯೊಂದು ಸಂಪ್ರಬಂಧವೂ ಮೇಲಿನ ಹೇಳಿಕೆಗೆ ಸಮರ್ಥನೆಯಾಗಬಲ್ಲದು.'

**ಶೂನ್ಯಸಂಪಾದನೆಯನ್ನು ಕುರಿತು(ಪ್ರ ಮು. ೧೯೬೨ ದ್ವಿ. ಮು. ೧೯೮೮)**

ಇದು ಚಿದಾನಂದಮೂರ್ತಿಯವರ ಮೊದಲ ಕೃತಿಯಾದಂತೆ, ಶೂನ್ಯ ಸಂಪಾದನೆಯ ಬಗೆಗೆ ಅಧಿಕೃತವಾಗಿ ಹೇಳ ಹೊರಟ ಮೊದಲ ಕೃತಿಯೂ ಆಗಿದೆ. ಪ್ರಸ್ತುತ ಗ್ರಂಥದಲ್ಲಿ ಏಳು ಅಧ್ಯಾಯಗಳು, ಐದು ಅನುಬಂಧಗಳಿವೆ. ಹಿನ್ನೆಲೆ, ಎಂಬ ಭಾಗದಲ್ಲಿ ಶೂನ್ಯ ಸಂಪಾದನೆಯ ಹುಟ್ಟಿನ ಹಿನ್ನೆಲೆ , ವೀರಶೈವಧರ್ಮದ ಉಗಮ-ಬೆಳವಣಿಗೆಯ ಬಗ್ಗೆ ಚರ್ಚೆಯಿದೆ. ಸಂಕಲನದ ಗ್ರಂಥದಲ್ಲಿ ಶೂನ್ಯ ಸಂಪಾದನೆಯ ಸ್ಥಾನ, ಅರ್ಥದ ಬಗ್ಗೆ ವಿವರಿಸಿದ್ದಾರೆ.

ಡಾ. ಚಿದಾನಂದಮೂರ್ತಿಯವರು ನಂತರದ ಅಧ್ಯಾಯದಲ್ಲಿ ಶೂನ್ಯ ಸಂಪಾದನೆ ಪರಿಷ್ಕರಣಗಳ ವಿವೇಚನೆ ಮಾಡಿದ್ದಾರೆ. ಶಿವಗಣ ಪ್ರಸಾದಿ ಮಹದೇವಯ್ಯನ ಶೂನ್ಯ ಸಂಪಾದನೆ, ಹಲಗೆಯದೇವರ ಶೂನ್ಯಸಂಪಾದನೆ, ಗುಮ್ಮಳಾಪುರದ ಸಿದ್ಧಲಿಂಗಯತಿಯ ಶೂನ್ಯಸಂಪಾದನೆ, ಮತ್ತು ಸಿದ್ದಲಿಂಗ ವೀರಣ್ಣೊಡೆಯ ಶೂನ್ಯ ಸಂಪಾದನೆಗಳ ವಿವರಣೆ ಇದೆ. ಎರಡನೆಯ ಮತ್ತು ನಾಲ್ಕನೆಯ ಶೂನ್ಯ ಸಂಪಾದನೆಗಳ-ತುಲನಾತ್ಮಕ ವಿವೇಚನೆ ಮಾಡಿದ್ದಾರೆ. ಅಲ್ಲಮನ ವೃತ್ತಾಂತ, ಸಿದ್ಧರಾಮ ವೃತ್ತಾಂತ ಮಾರ್ಮಿಕವಾಗಿ ಮೂಡಿ ಬಂದಿದೆ. ಮೂರು ಪರಿಷ್ಕರಣಗಳಲ್ಲಿ ಅಕ್ಕಮಹಾದೇವಿಯ ಅವತಾರವನ್ನು ಅವರು ಚಿತ್ರಿಸಿದ್ದಾರೆ. ನಂತರದ ಅಧ್ಯಾಯವು ಶೂನ್ಯ ಸಂಪಾದನೆಯ ಶೈಲಿ, ಪಾತ್ರಸೃಷ್ಟಿಯನ್ನು ಒಳಗೊಂಡಿದೆ. ಕೊನೆಯ ಅಧ್ಯಾಯವು ಶೂನ್ಯ ಸಂಪಾದನೆಯನ್ನು 'ವೀರಶೈವ ಧರ್ಮದ ಒಂದು ಪಠ್ಯ ಪುಸ್ತಕ' ವೆಂದು ಕರೆದು ಅದರ ಮಹತ್ವವನ್ನು ನಿರೂಪಿಸಿದ್ದಾರೆ.

ಪ್ರೊ. ತೀ.ನಂ. ಶ್ರೀಕಂಠಯ್ಯನವರು ಮುನ್ನುಡಿಯಲ್ಲಿ ಹೇಳಿರುವಂತೆ 'ಶೂನ್ಯ ಸಂಪಾದನೆ ಕನ್ನಡದ ಒಂದು ಅಪೂರ್ವ ಕೃತಿ. ಅದು ಧರ್ಮ ಜಿಜ್ಞಾಸುಗಳಂತೆಯೇ ಸಾಹಿತ್ಯ ರಸಿಕರ ಮನಸ್ಸನ್ನು ವಿಶ್ಲೇಷವಾಗಿ ಸೆಳೆದಿದೆ. ಇದರ ಗುರಿಯೇನು, ಸೊಗಸೇನು, ಹಿರಿಮೆಯೇನು, ಪಾಠ ಸಂಪ್ರದಾಯಗಳ ಬೆಳವಣಿಗೆಯೇನು, ಇಲ್ಲಿ ಎದ್ದಿರುವ, ಇದು ಎಬ್ಬಿಸಿರುವ ಸಮಸ್ಯೆಗಳೇನು, ಇಂತಹ ಹಲವು ಅಂಶಗಳನ್ನು ಕುರಿತು ಚಿದಾನಂದಮೂರ್ತಿಯವರು ತಮ್ಮ ಈ ಗ್ರಂಥದಲ್ಲಿ ಸಾಧಾರವಾಗಿ ವಿಚಾರ ಮಾಡಿದ್ದಾರೆ. ಮುಖ್ಯವಾಗಿ ಸಾಮಾನ್ಯ ವಾಚಕರಿಗೆ ಮನಮುಟ್ಟುವಂತೆ ಆದಷ್ಟು ಸರಳವಾಗಿ ನಿರೂಪಿಸಬೇಕೆಂಬುದು ಅವರ ಉದ್ದೇಶ. ಆದರೆ ವೀರಶೈವ ಸಾಹಿತ್ಯದ ಅಭ್ಯಾಸದಲ್ಲಿ ತಕ್ಕ ಮಟ್ಟದ ಪರಿಶ್ರಮವುಳ್ಳವರು ಕೂಡ ಇದನ್ನು ಓದಿ ಅನೇಕ ಹೊಸ ವಿಷಯಗಳನ್ನು ತಿಳಿದುಕೊಳ್ಳಬಹುದು. ಹೊಸದೃಷ್ಟಿ ಯನ್ನೂ ಬೆಳೆಸಿ ಕೊಳ್ಳಬಹುದು'.

ಗ್ರಂಥದ ಪ್ರತಿಯೊಂದು ಅಧ್ಯಾಯವು ಶೂನ್ಯ ಸಂಪಾದನೆಯ ಬೇರೆ ಬೇರೆ ಮುಖ ಗಳನ್ನು ಪರಿಚಯ ಮಾಡಿಕೊಡಲು, ಪ್ರತಿಯೊಂದು ಅಂಶವನ್ನು ವಸ್ತು ನಿಷ್ಠವಾಗಿ ಪರಿಶೀಲಿಸುವುದರಿಂದ ಶೂನ್ಯ ಸಂಪಾದನೆಯ ಬಗ್ಗೆ ವಿಶ್ವಾಸಾರ್ಹ ಮಾಹಿತಿ ಒದಗಿಸುವಲ್ಲಿ ಪ್ರಸ್ತುತ ಕೃತಿ ಯಶಸ್ವಿಯಾಗಿದೆ.

**ಬಸವಣ್ಣನವರು (೧೯೭೨)**

ಬಸವಣ್ಣನವರ ಜೀವನ ಚರಿತ್ರೆಯನ್ನು ವಿಶ್ವಾಸಾರ್ಹ ರೀತಿಯಲ್ಲಿ ಚಿತ್ರಿಸಿದ್ದಾರೆ. ಇದು ಆಂಗ್ಲ ಭಾಷೆಯಲ್ಲಿದೆ. ಇದರಲ್ಲಿ ಹನ್ನೊಂದು ಅಧ್ಯಾಯಗಳಿವೆ. ಬಸವಣ್ಣನವರ ಕಾಲ, ಬಾಲ್ಯದಿನಗಳು, ಸ್ವೇಚ್ಛಾವಿಹಾರಿ, ಸಮಾಜ ಪುನರ್ಪ್ರವೇಶ, ಕಲ್ಯಾಣ, ಕ್ರಾಂತಿಕಾರ ಹಾಗೂ ಸುಧಾರಕ, ಆಧ್ಯಾತ್ಮಿಕ ಸಾಧಕ, ಬಸವಣ್ಣನವರು ಅವರ ಸಮಕಾಲೀನರು, ಕೊನೆಯ ದಿನಗಳು, ವಚನಕಾರ ಬಸವಣ್ಣನವರು ಮತ್ತು ಉಪಸಂಹಾರ ಇವು ಬಸವಣ್ಣ ನವರ ಜೀವನದ ವಿವಿಧ ಮುಖಗಳನ್ನು ಪರಿಚಯ ಮಾಡಿ ಕೊಡುತ್ತದೆ.

ಆಂಗ್ಲ ಮೂಲದ ಈ ಕೃತಿಯನ್ನು ಶಂ.ಸ. ಐತಾಳರವರು ಕನ್ನಡಕ್ಕೆ ಅನುವಾದಿಸಿ ತುಂಬ ಉಪಕರಿಸಿದ್ದಾರೆ.

**ವಚನ ಸಾಹಿತ್ಯ(೧೯೭೫)**

ಬೆಂಗಳೂರು ವಿಶ್ವವಿದ್ಯಾಲಯದ 'ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ' ಯೋಜನೆಯ ವ್ಯಾಪ್ತಿಯಲ್ಲಿ ಬರುವ ಐದನೆಯ ಕೃತಿ ಇದು. ಈ ಪುಸ್ತಕದಲ್ಲಿ ಹತ್ತು ಅಧ್ಯಾಯಗಳಿವೆ. ವಚನ ಸಾಹಿತ್ಯದ ಉಗಮ, ಹಿನ್ನೆಲೆ, ಪ್ರಮುಖ ವಚನಕಾರರು. ಇತರ ವಚನಕಾರರು, ವಚನಕಾರ್ತಿಯರು, ವಚನಸಾಹಿತ್ಯ-ಒಂದು ಸಮೀಕ್ಷೆ , ಸಂಗೋಪನಯುಗ, ಸಂಕಲನ

ಯುಗ, ಮತ್ತೆ ವಚನಕಾರರು, ಮತ್ತು ವಚನಕಾರರು ಮುಂದಿನ ಕನ್ನಡ ಸಾಹಿತ್ಯ ಎಂಬ ಅಧ್ಯಾಯಗಳಿವೆ.

ಪ್ರೊ. ಕಿ. ರಂ. ನಾಗರಾಜರು ಅಭಿಪ್ರಾಯ ಪಡುವಂತೆ 'ವಚನಗಳ ಉಗಮದ ಚರ್ಚೆಯಿಂದ ಹಿಡಿದು ಅದರ ಅನೇಕ ಸಾಂಸ್ಕೃತಿಕ ಸಮಸ್ಯೆಗಳನ್ನು ಪರಿಚಯ ಮಾಡಿಕೊಡುವ ಈ ಪುಸ್ತಕದಲ್ಲಿ ಡಾ. ಚಿದಾನಂದಮೂರ್ತಿಯವರು ಸಂಶೋಧನೆ ಮತ್ತು ಸಾಹಿತ್ಯಕ ವಿಶ್ಲೇಷಣೆ ಇವುಗಳನ್ನು ಸಮಸಮವಾಗಿ ಹೊಂದಾಣಿಕೆಗೊಳಿಸುವ ಪ್ರಯತ್ನವನ್ನು ಯಶಸ್ವಿಯಾಗಿ ನಿರ್ವಹಿಸಿದ್ದಾರೆ.'-ಸಾಹಿತ್ಯ ವಾರ್ಷಿಕ (೧೯೭೫)

ಈ ಕೃತಿ ವಚನ ಸಾಹಿತ್ಯದ ಒಟ್ಟು ಸಮೀಕ್ಷೆಯನ್ನು ಒಳಗೊಂಡಿದೆ.

**ಲಿಂಗಾಯತ ಅಧ್ಯಯನಗಳು (೧೯೮೬)**

ಲಿಂಗಾಯತ ಸಾಹಿತ್ಯ, ಮತ, ಸಮಾಜಗಳನ್ನು ಕುರಿತಂತೆ ಐವತ್ತೇಳು ಸಂಪ್ರಬಂಧಗಳ ಸಂಕಲನವಿದು. 'ಜೇಡರ ದಾಸಿಮಯ್ಯನ ವೀರಶೈವತತ್ವ', 'ಲಿಂಗಾಯತ ಪದದ ನಿಷ್ಪತ್ತಿ', ಮುಂತಾದ ವಿಷಯಗಳನ್ನು ತೆಗೆದುಕೊಂಡು ಅದನ್ನು ವಿಶ್ಲೇಷಿಸುವ, ಬಿಡಿಸುವ ಯತ್ನ ಒಂದೊಂದು ಲೇಖನದಲ್ಲಿಯೂ ಉಂಟು. ಇಲ್ಲಿಯ ಕೆಲವು ಲೇಖನಗಳು ಸಾಹಿತ್ಯಾಸಕ್ತರ ಗಮನವನ್ನು ಸೆಳೆದು ಚರ್ಚೆಗೆ ಅವಕಾಶ ಮಾಡಿಕೊಟ್ಟಿವೆ. ಹಿಂದೆ ನಡೆದಿರುವ ಚರ್ಚೆಗಿಂತ ಮುಂದೆ ಹೋಗುವ ಪ್ರಯತ್ನ ನಡೆದಿದೆ. 'ಸರ್ವಜ್ಞ' ಕವಿಯ ಅಂಕಿತ ವಿಚಾರ , 'ಕಾಯಕ ತತ್ವ', 'ಪಂದರ' ಅಲ್ಲ 'ಪಂಡಾರ'(ವೀರಶೈವ) ಮುಂತಾದ ಲೇಖನಗಳಲ್ಲಿ ಅನೇಕ ಹೊಸ ಸಂಗತಿಗಳನ್ನು ಎತ್ತಿ ತೋರಿಸಿದ್ದಾರೆ.

ದೇವರಕೊಂಡಾರೆಡ್ಡಿಯವರ ಅಭಿಪ್ರಾಯಗಳು ಇಂತಿವೆ. 'ಹೆಂಡದ ಮಡಕೆ, ನಾಗಾವಾಸ, ಗೋಗ್ಗೇಶ್ವರ ಮುಂತಾದವು ಸಣ್ಣ ವಿಷಯಗಳಾಗಿದ್ದರೂ ಡಾ. ಮೂರ್ತಿಯವರು ಅವುಗಳ ಬಗ್ಗೆ ವಿವರವಾಗಿ ಅಧ್ಯಯನ ಮಾಡಿರುವರು. ವಚನಗಳನ್ನಾಧರಿಸಿದ 'ಅಲ್ಲಮನ ಸಾರ್ಥಕಜೀವನ-ಒಂದು ಪುನಾರಚನೆ' ಎಂಬ ಲೇಖನಕ್ಕೆ ಹರಿಹರ ಮತ್ತು ಚಾಮರಸರಿಗಿಂತಲೂ ಭಿನ್ನವಾಗಿ ಅವರು ಅಲ್ಲಮನ ಜೀವನದ ವಿವರಗಳನ್ನು ನೀಡಿರುವರು. ಅವನು ಮಾನವತ್ವದಿಂದ ಹೇಗೆ ದೈವತ್ವಕ್ಕೇರಿದನೆಂಬುದನ್ನು ಸಾಧಾರವಾಗಿ ಚಿತ್ರಿಸಿರುವರು. 'ಉಗಾಭೋಗಗಳು ಮತ್ತು ವಚನಗಳು' ಎಂಬ ಲೇಖನದಲ್ಲಿ ಉಗಾಭೋಗ, ಸುಳಾದಿಗಳ ಮೇಲೆ ವಚನಗಳು ಬೀರಿರುವ ಪ್ರಭಾವವನ್ನು ಗುರುತಿಸಿರುವರು... ಡಾ. ಮೂರ್ತಿಗಳು ರಚಿಸಿರುವ ಲೇಖನಗಳು ಅಮೂಲ್ಯವಾದುದೆನ್ನಲಡ್ಡಿಯಿಲ್ಲ.

ಚಿದಾನಂದಮೂರ್ತಿಯವರು ಬಹುದೊಡ್ಡ ವಿಚಾರವಾದಿಗಳು ಆಗಿದ್ದಾರೆಂಬುದಕ್ಕೆ 'ಲಿಂಗಾಯತ ಅಧ್ಯಯನಗಳು' ಮತ್ತು ' ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ' ಈ ಕೃತಿಗಳು ಸಮರ್ಥ ಸಾಕ್ಷಿಯಾಗಿವೆ.

# ಭಾಷಾವಿಜ್ಞಾನ

**ಭಾಷಾ ವಿಜ್ಞಾನ ಮೂಲತತ್ವಗಳು (ಪ್ರ.ಮು. ೧೯೬೫ ತೃ.ಮು. ೧೯೮೬)**

ಭಾಷಾವಿಜ್ಞಾನಕ್ಕೆ ಸಂಬಂಧಪಟ್ಟ ಗ್ರಂಥವಿದು. ಇದರಲ್ಲಿ ಹದಿಮೂರು ಅಧ್ಯಾಯಗಳಿವೆ. ಹೆಚ್ಚು ಐತಿಹಾಸಿಕ ಭಾಷಾ ವಿಜ್ಞಾನಕ್ಕೆ ಪ್ರಾಮುಖ್ಯತೆ ಇದ್ದರೂ ವರ್ಣನಾತ್ಮಕ ಮತ್ತು ತೌಲನಿಕ ಭಾಷಾವಿಜ್ಞಾನಗಳ ಪರಿಚಯ ಮಾಡಿದ್ದಾರೆ.

ಭಾಷೆಯೆಂದರೇನು? ಭಾಷೆಯ ಉಗಮ, ಭಾಷಾವರ್ಗೀಕರಣ ಇವು ಸಾಮಾನ್ಯ ಭಾಷಾವಿಜ್ಞಾನದ ಕಕ್ಷೆಗೆ ಒಳಪಡುತ್ತವೆ. ಧ್ವನಿ ವ್ಯತ್ಯಾಸ, ಭಾಷಾವ್ಯತ್ಯಾಸ, ಭಾಷಾ ಸ್ವೀಕರಣ, ಸಾಮ್ಯಮೂಲವ್ಯತ್ಯಾಸ, ಐತಿಹಾಸಿಕ ಭಾಷಾ ವಿಜ್ಞಾನದ ವ್ಯಾಪ್ತಿಗೆ ಒಳಪಡುತ್ತವೆ. ಧ್ವನಿ ವಿಜ್ಞಾನ, ವರ್ಣನಾತ್ಮಕ ಭಾಷಾ ವಿಜ್ಞಾನಕ್ಕೆ ಸೇರುತ್ತದೆ. ವಿವರಣಾತ್ಮಕ, ಐತಿಹಾಸಿಕ ಮತ್ತು ತೌಲನಿಕ ಭಾಷಾವಿಜ್ಞಾನದ ಪ್ರಾಥಮಿಕ ಅಂಶಗಳನ್ನು ಚರ್ಚಿಸಿದ್ದಾರೆ. ಗ್ರಂಥಾಭ್ಯಾಸಕ್ಕೆ ಅನುಕೂಲವಾಗುವಂತೆ ಮೂರು ಅನುಬಂಧಗಳಿವೆ.

**ಈ ಗ್ರಂಥದ ಬಗ್ಗೆ ವಿದ್ವಾಂಸರ ಅಭಿಪ್ರಾಯಗಳು ಇಂತಿವೆ**

"ಭಾಷಾವಿಜ್ಞಾನದ ಸಾಮಾನ್ಯ ಅಂಶಗಳಿಗೆ ಈ ಕನ್ನಡ ಗ್ರಂಥ ಉತ್ತಮ ಪೀಠಿಕೆಯಾಗಿದೆ. ಸರಳ ಶೈಲಿಯಲ್ಲಿ ಬರೆಯಲ್ಪಟ್ಟಿದೆ. ಇದು ಭಾಷಾವಿಜ್ಞಾನ ವಿಷಯದ ಬಗ್ಗೆ ಲೇಖಕರ ಉತ್ಸಾಹವನ್ನು ತೋರಿಸುತ್ತದೆ. ಭಾಷಾವಿಜ್ಞಾನ ವಿಷಯಗಳ ಕೆಲವು ಬದಲಾವಣೆಗಳ ಬಗೆಗೆ ಖಂಡಿತವಾಗಿಯೂ, ಇದು ಓದುಗರ ಗಮನವನ್ನು ಸೆಳೆಯುತ್ತದೆ."

- ಡಾ. ಡಿ. ಎನ್. ಶಂಕರಭಟ್ಟ

"ಇದು ಐತಿಹಾಸಿಕ ಮತ್ತು ತೌಲನಿಕ ಭಾಷಾವಿಜ್ಞಾನಕ್ಕೆ ಉತ್ತಮ ಪ್ರವೇಶಿಕೆಯಾಗಿದೆ".

- ಡಾ. ಹಾ.ಮಾ. ನಾಯಕ

"ಚಿದಾನಂದಮೂರ್ತಿಯವರ ಭಾಷಾವಿಜ್ಞಾನದ ಮೂಲತತ್ವಗಳು ಸಮರ್ಥವಾಗಿ ಓದಿಸಿಕೊಳ್ಳುವ ಶ್ರೇಷ್ಠ ಕೃತಿಯಾಗಿದೆ. ಆಧುನಿಕ ಧೋರಣೆಗಳನ್ನು ಇಲ್ಲಿ ಲೇಖಕರು ಯಶಸ್ವಿಯಾಗಿ ಹಿಡಿದಿಟ್ಟಿದ್ದಾರೆ. ಗ್ರಂಥದ ಬಹುಭಾಗ ಐತಿಹಾಸಿಕ ಭಾಷಾವಿಜ್ಞಾನದ ವೈಶಿಷ್ಟ್ಯತೆಯನ್ನು ಒಳಗೊಂಡಿದ್ದರೂ ವರ್ಣನಾತ್ಮಕ ವಿಧಾನವನ್ನೂ ಸ್ಥೂಲವಾಗಿ ನಿರೂಪಿಸುತ್ತದೆ."

- ಡಾ. ಹೆಚ್. ಎಸ್. ಬಿಳಿಗಿರಿ

"ವೈಜ್ಞಾನಿಕ ದೃಷ್ಟಿಯಿಂದ ವಿಸ್ತರಣಗೊಂಡ ಆಧುನಿಕ ವಿಚಾರ ಧಾರೆಯಲ್ಲಿ ಭಾಷಾ ವಿಜ್ಞಾನದ ಮೂಲ ತತ್ವಗಳನ್ನು ಕುರಿತು ಕನ್ನಡದಲ್ಲಿ ಮೊದಲು ಬಾರಿಗೆ ಬರೆದು ಪ್ರಕಟವಾದ

ಗ್ರಂಥವೆಂದರೆ ಡಾ. ಎಂ. ಚಿದಾನಂದಮೂರ್ತಿಯವರ ಭಾಷಾವಿಜ್ಞಾನದ ಮೂಲತತ್ವ ಗಳು ಎಂಬುದೆ ಆಗಿದೆ."

- ಡಾ. ಟಿ.ವಿ. ವೆಂಕಟಾಚಲಶಾಸ್ತ್ರಿ

**ವಾಗರ್ಥ (೧೯೮೧)**

ಭಾಷಾವಿಜ್ಞಾನಕ್ಕೆ ಸಂಬಂಧಪಟ್ಟಂತೆ ಇಪ್ಪತ್ತನಾಲ್ಕು ಸಂಪ್ರಬಂಧಗಳ ಸಂಕಲನವಿದು. ಕರ್ನಾಟಕದ ಸ್ಥಳನಾಮಗಳು, ವ್ಯಕ್ತಿನಾಮಗಳು, ಊರುಗಳಿಗೆ ಎರಡೆರಡು ಹೆಸರುಗಳು, ..ವರ ಅಥವಾ ವಾರ ಎಂದು ಕೊನೆಯಾಗುವ ಹೆಸರುಗಳು ಮುಂತಾದ ಲೇಖನಗಳು ಸಾಮಾಜಿಕ ಭಾಷಾವಿಜ್ಞಾನದ (sociolinguistics) ವ್ಯಾಪ್ತಿಗೆ ಒಳಪಟ್ಟರೂ ಚಿದಾನಂದಮೂರ್ತಿಯವರು ವರ್ಣನಾತ್ಮಕ, ಐತಿಹಾಸಿಕ, ಸಾಮಾಜಿಕ ಭಾಷಾ ವಿಜ್ಞಾನ ಮತ್ತು ಇತಿಹಾಸ, ಸಾಹಿತ್ಯ, ಸಂಸ್ಕೃತಿಯ ಹಿನ್ನೆಲೆಯಲ್ಲಿ ಸ್ಥಳನಾಮ, ವ್ಯಕ್ತಿನಾಮಗಳನ್ನು ವಿಶ್ಲೇಷಿಸಿದ್ದಾರೆ.

'ಅಮ್ಮ', 'ಅಬ್ಬೆ', 'ಅಲ್ಲಮ', 'ಬಾದುಬ್ಬೆ', 'ಅಡ್ಡಾಯುಧ' (ಅಡಾಯುದ್ದ), 'ಅಡ್ಡ ಹೆಸರು', 'ಗುಬ್ಬಚ್ಚಿ - ಒಂದು ವಿವೇಚನೆ' ಮುಂತಾದ ಲೇಖನಗಳು ಶಬ್ದ ನಿಷ್ಪತ್ತಿಯನ್ನು ಕುರಿತ ಲೇಖನಗಳಾದರೂ ವ್ಯಾಕರಣ-ಶಬ್ದಕೋಶ ವಿಕಾಸದ ದೃಷ್ಟಿಯಿಂದ ಮಹತ್ವದ ಅಧ್ಯಾಯಗಳಾಗಿವೆ.

'ಆದಯ್ಯ ಹೆಸರಿನ ನಿಷ್ಪತ್ತಿ ಮತ್ತು ಅದರಿಂದ ಹೊರಡುವ ಕೆಲವು ಧ್ವನಿಗಳು', 'ದೇಕಬ್ಬೆ ಶಾಸನದ ಸ್ಥಳಗಳನ್ನು (ಮತ್ತು ಇತರ ಕೆಲವು ಸಂಗತಿಗಳನ್ನು) ಕುರಿತು, 'ಬ್ರಾಹ್ಮಣರಿಗೆ ದಾನವಾಗಿಕೊಟ್ಟ ಊರ ಹೆಸರುಗಳ ಸೂಚಕಾಂಶಗಳು' ಎಂಬ ಲೇಖನಗಳು ಭಾಷೆಯನ್ನು ಕುರಿತಾಗಿದ್ದರೂ ಸಾಮಾಜಿಕ ಚೌಕಟ್ಟಿನಲ್ಲಿ ಅವುಗಳನ್ನು ನೋಡಲು ಬಯಸುತ್ತಾರೆ.

'ಕನ್ನಡ ಉಪ ಭಾಷೆಯೊಂದರಲ್ಲಿ ತಾಲವ್ಯೀಕರಣ ಮತ್ತು ಕಂಠ್ಯೀಕರಣ' ತುಂಬ ಶಕ್ತಿಯುತ ಲೇಖನವಿದು. ಈ ಪ್ರಕ್ರಿಯೆಯನ್ನು ಮೊದಲು ಬಾರಿಗೆ ಗುರುತಿಸಿದ ಶ್ರೇಯಸ್ಸು ಇವರದಾಗಿದೆ. ಡಾ. ಬಿ.ಬಿ. ರಾಜಪುರೋಹಿತರು ಹೇಳಿರುವಂತೆ 'IJDL ಪತ್ರಿಕೆಯಲ್ಲಿ ಅವರ ತಾಲವ್ಯೀಕರಣ ಕಂಠ್ಯೀಕರಣ ಲೇಖನ ಪ್ರಕಟವಾದಾಗ ಐತಿಹಾಸಿಕ ಭಾಷಾ ವಿಜ್ಞಾನಿಗಳು ಕುತೂಹಲದಿಂದ ಹುಬ್ಬೇರಿಸಿ ಈ ಶೋಧವನ್ನು ಮೆಚ್ಚಿದರು, ಕೇರಳ ವಿಶ್ವವಿದ್ಯಾಲಯದ ಪ್ರೊ. ವಿ. ಆಯ್. ಸುಬ್ರಹ್ಮಣಂ ಅವರು, 'ಕ್ರಿಯೆ' 'ಪ್ರತಿಕ್ರಿಯೆಗಳು' ಭೌತವಿಜ್ಞಾನದಲ್ಲಷ್ಟೇ ಅಲ್ಲ, ಭಾಷಾವಿಜ್ಞಾನದಲ್ಲೂ ನಡೆಯುತ್ತದೆ ಎಂಬ ಕುತೂಹಲಕಾರಿ ಹೇಳಿಕೆಯನ್ನು ಕೊಟ್ಟರು, ಇದು ಶೋಧದ ಮಹತ್ವವನ್ನು ಎತ್ತಿ ತೋರಿಸುತ್ತದೆ. ವ್ಯಾವಹಾರಿಕ ಶಿಷ್ಟ ಕನ್ನಡದಲ್ಲಿರುವ ವಿಭಕ್ತಿಗಳು, ವಿಭಕ್ತಿ ಪಲ್ಲಟ ಕ್ರಿಯೆಗಳನ್ನು ಮೂರ್ತಿಯವರು ಒಂದು ಲೇಖನದಲ್ಲಿ ಚರ್ಚಿಸಿದ್ದಾರೆ. 'ವಾರ್ತಾ ಮಾಧ್ಯಮದಲ್ಲಿ ಕನ್ನಡಭಾಷೆಯ ಆಧುನೀಕರಣ' ಎಂಬ ಲೇಖನ ಅನ್ವಯಿಕ ಸಾಮಾಜಿಕ

ಭಾಷಾವಿಜ್ಞಾನದ ಕಕ್ಷೆಯಲ್ಲಿ ಬರುತ್ತದೆ. (Applied Sociolinguistics) ಆ ಅಧ್ಯಯನಕ್ಕೆ ಡಾ. ಮೂರ್ತಿಯವರು ಬೇರೆ ಬೇರೆ ಉಪಭಾಷಾವಲಯಗಳಲ್ಲಿ ಬರುವ ನಾಲ್ಕು ವೃತ್ತ ಪತ್ರಿಕೆಗಳನ್ನು ಮತ್ತು ಆಕಾಶವಾಣಿ ಸುದ್ಧಿಗಳನ್ನು ಬಳಸಿಕೊಂಡಿದ್ದಾರೆ. ಆಧುನೀಕರಣದ ಹಿನ್ನೆಲೆಯಲ್ಲಿ ಅನ್ಯಭಾಷಾ ಶಬ್ದಗಳನ್ನು ನಮ್ಮ ಭಾಷೆಯ ಜಾಯಮಾನಕ್ಕೆ ತಕ್ಕಂತೆ ಯಾವ ರೀತಿಯಾಗಿ ಬಳಸಿಕೊಳ್ಳಬೇಕೆಂಬುದರ ಬಗ್ಗೆ ವಿವರವಾಗಿ ಹೇಳಿದ್ದಾರೆ.

ಡಾ. ಬಿ.ಬಿ. ರಾಜಪುರೋಹಿತರು ಹೇಳಿರುವಂತೆ "ವಾಗರ್ಥ ಕನ್ನಡ ಸಂಶೋಧನಾ ಸಾಹಿತ್ಯದಲ್ಲಿ ಅತ್ಯಂತ ಮಹತ್ವದ ಕೃತಿ ಎಂಬ ಬಗ್ಗೆ ಸಂದೇಹವಿಲ್ಲ. ಅನೇಕ ಸಂದಿಗ್ದ ವಿಷಯಗಳ ಮೇಲೆ ನಿರ್ಣಾಯಕ ಬೆಳಕು ಚೆಲ್ಲಿದ್ದಾರೆ."

ಡಾ. ಕೃಷ್ಣ ಪರಮೇಶ್ವರಭಟ್ಟರು ಅಭಿಪ್ರಾಯ ಪಡುವಂತೆ "......ಕನ್ನಡ ಭಾಷೆಗೆ ಸಂಬಂಧಿಸಿದ ಮೂರು ನಾಲ್ಕು ಲೇಖನಗಳನ್ನುಳಿದರೆ ಉಳಿದವು ಭಾಷೆಯ ವಿವೇಚನೆ ಯನ್ನೇ ಮುಖ್ಯವಾದ ಉದ್ದೇಶವನ್ನಾಗಿಟ್ಟುಕೊಂಡವುಗಳು. ಇವುಗಳ ಆಸಕ್ತಿ ಮುಖ್ಯ ವಾಗಿ ಕನ್ನಡದ ಇತಿಹಾಸ ಸಂಸ್ಕೃತಿಯನ್ನು ಕುರಿತಾಗಿದೆ. ಈ ಹಿನ್ನೆಲೆಯಲ್ಲಿಯೇ ಈ ಲೇಖನಗಳನ್ನು ನೋಡುವುದು ಸೂಕ್ತ."

## ಜಾನಪದ ಶಾಸ್ತ್ರ

**ಗ್ರಾಮೀಣ(೧೯೭೭)**

ಜಾನಪದ ಅಧ್ಯಯನಕ್ಕೆ ಸಂಬಂಧಿಸಿದ ಹತ್ತೊಂಬತ್ತು ಸಂಪ್ರಬಂಧಗಳ ಸಂಕಲನವಿದು. ಇಲ್ಲಿಯ ಸಂಪ್ರಬಂಧಗಳೆಲ್ಲವೂ ಒಂದಲ್ಲ ಒಂದು ರೀತಿಯಲ್ಲಿ ಗ್ರಾಮ ಜೀವನಕ್ಕೆ ಸಂಬಂಧಿಸುವುದರಿಂದ ಈ ಸಂಕಲನಕ್ಕೆ 'ಗ್ರಾಮೀಣ' ಎಂದು ನಾಮಕರಣ ಮಾಡಿರುವುದು ಉಚಿತವಾಗಿದೆ.

ಈ ಗ್ರಂಥದಲ್ಲಿ 'ಪಗರಣ' ಅಥವಾ 'ಹಗರಣ' ಎಂಬ ಜಾನಪದ ಕಲೆಯ ಇತಿಹಾಸ ಮತ್ತು ಇಂದಿನ ಚಿತ್ರವಿರುವ ಒಂದು ಸಂಪ್ರಬಂಧವಿದೆ. 'ಐನೋರು ಮತ್ತು ಕಾಲಿಲ್ಲದ ಐನೋರು' ಎಂಬಲ್ಲಿ ಕುರುಬ ಜನಾಂಗದಲ್ಲಿ ಹೇಗೆ ಪಾವಿತ್ರ್ಯವನ್ನು ವ್ಯಕ್ತಿ ತನ್ನಿಂದ ಅಚೇತನ ವಸ್ತುವಿಗೆ ಹರಿಯಿಸಿ ತನಗೆ ಇರುವ ಧಾರ್ಮಿಕ ಸ್ಥಾನಮಾನಗಳು ಆ ವಸ್ತುವಿಗೂ ಪ್ರಾಪ್ತವಾಗುವಂತೆ ಮಾಡಬಲ್ಲನೆಂಬ ವಿಲಕ್ಷಣ ಸಂಗತಿ ಇದೆ. 'ಶೂಲದ ಹಬ್ಬ' ದಲ್ಲಿ ಆ ಹೆಸರಿನ ಹಬ್ಬದ ಒಂದು ವರದಿ ಮಾತ್ರವಲ್ಲದೆ, ರಾಮನಾಥಚರಿತೆಯಲ್ಲಿ ಬರುವ ಅದೇ ಹೆಸರಿನ ಹಬ್ಬವನ್ನು ಅರ್ಥ ಮಾಡಿಕೊಳ್ಳಲು ಅದು ಸಹಾಯಕವಾಗಿರುವುದನ್ನು ವಿವರಿಸಿದೆ. 'ದೇವದಾಸಿ' ಮತ್ತು 'ಬಸವಿ' ಪದ್ದತಿಗಳಿಗಿರುವ ವ್ಯತ್ಯಾಸ ಇಲ್ಲಿಯ ಎರಡು ಸಂಪ್ರಬಂಧಗಳಿಂದ ಸ್ಪಷ್ಟವಾಗುತ್ತದೆ. ಇಂದಿನ ಹಳ್ಳಿಗಳಲ್ಲಿ ನಡೆದಿರುವ ಆಧುನೀಕರಣ

ಒಂದು ಸಂಪ್ರಬಂಧದ ವಸ್ತು. ಮಾಸ್ತಿ ಗುಡಿಗಳಿಗೆ ಸಂಬಂಧಿಸಿದ ಜಾನಪದ ಸಾಮಗ್ರಿಯಲ್ಲಿ ಹಿಂದಿನ ಇತಿಹಾಸ ಸುರಕ್ಷಿತವಾಗಿ ಉಳಿದಿರುವ ಅಂಶ ಒಂದು ಸಂಪ್ರಬಂಧದಲ್ಲಿ ಮೂಡಿ ಬಂದಿದೆ. ಬಳೆ, ಕುಂಕುಮ, ಓಲೆ, ತಾಳಿ ಮುಂತಾದ ಸೌಭಾಗ್ಯದ ಸಂಕೇತಗಳ ಇತಿಹಾಸ ಮತ್ತು ಹರಹು ಒಂದು ಸಂಪ್ರಬಂಧದಲ್ಲಿದೆ. ಗಾದೆಗಳ ರಾಚನಿಕ ವಿಶ್ಲೇಷಣೆ ಮಾಡುತ್ತಾ ಅವುಗಳ ಸ್ವಾರಸ್ಯವಿರುವುದು ಅವುಗಳ ಬಂಧದಲ್ಲಿ ಎಂಬುದನ್ನು ಒಂದು ಸಂಪ್ರಬಂಧದಲ್ಲಿ ಸ್ಪಷ್ಟಗೊಳಿಸಿದ್ದಾರೆ. 'ಕರಪಲ್ಲ' ಎಂಬ ಒಂದು ಚಮತ್ಕಾರದ ವಿದ್ಯೆಯ ಪರಿಚಯು ಒಂದು ಕಡೆ ಬಂದಿದೆ. ಜನಪದ ಕತೆ, ಐತಿಹ್ಯ ಮತ್ತು ಪುರಾಣಗಳಿಗಿರುವ ಮೂಲಭೂತ ವ್ಯತ್ಯಾಸಗಳನ್ನು ಒಂದು ಸಂಪ್ರಬಂಧ ಸ್ಪಷ್ಟಪಡಿಸುತ್ತದೆ. ಇಲ್ಲಿರುವ ಹತ್ತೊಂಬತ್ತು ಸಂಪ್ರಬಂಧಗಳು ಅನೇಕ ಸಂಗತಿಗಳ ಮೇಲೆ ಬೆಳಕು ಚೆಲ್ಲುವುದಲ್ಲದೆ ಹೆಚ್ಚಿನ ಸಂಶೋಧನೆಗೆ ಸಾಮಗ್ರಿಯನ್ನು ಒಳಗೊಂಡಿವೆ.

**ಸಾಹಿತ್ಯ ವಾರ್ಷಿಕ (೧೯೭೭)**

ನಮ್ಮ ಗ್ರಾಮಜೀವನದ ವಿವಿಧ ಮುಖಗಳನ್ನು ಒಳಹೊಕ್ಕು ಪರಿಶೀಲಿಸುವ, ವಿವರಿಸುವ, ವ್ಯಾಖ್ಯಾನಿಸುವ, ಒಟ್ಟು ಭಾರತೀಯ ಸಂದರ್ಭದಲ್ಲಿ ಅರ್ಥ ಮಾಡಿಕೊಳ್ಳುವ ಪ್ರಾಮಾಣಿಕ ಪ್ರಯತ್ನಗಳು ಇಲ್ಲಿವೆ. ಜಾನಪದ, ಭಾಷಾವಿಜ್ಞಾನ, ಸಂಸ್ಕೃತಿ ಅಧ್ಯಯನ ಸಾಹಿತ್ಯ, ಸಮಾಜಶಾಸ್ತ್ರ, ಮನಶ್ಶಾಸ್ತ್ರ, ಇತಿಹಾಸ ಇವೆಲ್ಲವೂ ಯಾವುದೇ ಮಾನವಿಕ ವಿಷಯದ ವಿವೇಚನೆಯಲ್ಲಿ ಪರಸ್ಪರವಾಗಿ ಸಹಾಯಕವಾಗುತ್ತವೆಂಬುದಕ್ಕೆ ಇಲ್ಲಿಯ ಸಂಪ್ರಬಂಧಗಳು ಸಾಕ್ಷಿಯಾಗಿವೆ.

**ಪೂರ್ಣ ಸೂರ್ಯಗ್ರಹಣ(೧೯೮೨)**

ಇದು ಕನ್ನಡದ ಅಪೂರ್ವ ಕೃತಿಗಳಲ್ಲಿ ಒಂದು. ಚಿದಾನಂದಮೂರ್ತಿಯವರ ವಿಶಿಷ್ಟ ಕೊಡುಗೆ. ೧೯೮೧ ಫೆಬ್ರುವರಿ ೧೬ ರಂದು ಕರ್ನಾಟಕದ ಕೆಲವು ಭಾಗಗಳಲ್ಲಿ ಪೂರ್ಣ ಸೂರ್ಯಗ್ರಹಣ ಕಾಣಲು ದೊರೆತ ವಿಶಿಷ್ಟ ಅನುಭವ ಈ ಗ್ರಂಥದಲ್ಲಿದೆ. ಪ್ರಸ್ತುತ ಗ್ರಂಥದಲ್ಲಿ ಎಂಟು ಅಧ್ಯಾಯ ಮತ್ತು ಹತ್ತು ಅನುಬಂಧಗಳಿವೆ.

ಗ್ರಹಣ ಮತ್ತು ಸಾಮಾನ್ಯ ಮನುಷ್ಯ, ಗ್ರಹಣಗಳ ಬಗ್ಗೆ ಪುರಾಣಗಳು, ನಂಬಿಕೆಗಳು, ರಿಚುಯಲ್ಲುಗಳು, ಗ್ರಹಣಗಳು ಪ್ರಾಚೀನರು ಕಂಡಂತೆ, ಫೆಬ್ರುವರಿ ಹದಿನಾರು ನನ್ನ ಅನುಭವದಲ್ಲಿ, ಎಂ.ಎ.(ಕನ್ನಡ) ವಿದ್ಯಾರ್ಥಿಗಳನ್ನು ಪ್ರವಾಸಕ್ಕೆ ಕರೆದುಕೊಂಡು ಹೋದಾಗ ಶಿರಸಿಯಲ್ಲಿ ತಮಗಾದ ಗ್ರಹಣದ ಬಗ್ಗೆ ಅನುಭವವನ್ನು ಮೂರ್ತಿಯವರು ಮಾರ್ಮಿಕವಾಗಿ ಹೇಳಿದ್ದಾರೆ. ಗ್ರಹಣದ ಸಾಮಾಜಿಕ ಸಮೀಕ್ಷೆ ಎಂಬ ಭಾಗದಲ್ಲಿ ನಾಡಿನ ಬೇರೆ- ಬೇರೆ ಭಾಗದಲ್ಲಿ ಕ್ಷೇತ್ರ ಕಾರ್ಯ ಮಾಡಿ, ಪ್ರಶ್ನಾವಳಿಗಳನ್ನು ತಯಾರಿಸಿ, ಸಾಮಗ್ರಿ ಸಂಗ್ರಹಿಸಿ ವಿಶ್ಲೇಷಿಸಿದ್ದಾರೆ. ಸೂರ್ಯ ಗ್ರಹಣ ಅದ್ಭುತ ಮಹಾಶಾಂತಿ ಮಹೋತ್ಸವ, ವಿವಿಧ ಸಮೂಹ ಮಾಧ್ಯಮದಲ್ಲಿ ಗ್ರಹಣ ಕುರಿತು ಬಂದ ಹೊಸ ಹೊಸ ಸಂಗತಿಗಳನ್ನು ಸಂಗ್ರಹಿಸಿದ್ದಾರೆ.

ಉಪ ಸಂಹಾರ ಭಾಗದಲ್ಲಿ ಸಮಾಜೋ - ಸಾಂಸ್ಕೃತಿಕ ಸಮೀಕ್ಷೆ ಮಾಡಿ ಗ್ರಹಣದ ಬಗ್ಗೆ ಯಾರಲ್ಲಿ ಹೆಚ್ಚು ಮೂಢನಂಬಿಕೆಗಳಿವೆ ಎಂಬುದನ್ನು ಗುರುತಿಸಿದ್ದಾರೆ. ಜನರ ಪ್ರತಿಕ್ರಿಯೆಗಳ ಬಗ್ಗೆ ಸಮೂಹ ಮಾಧ್ಯಮಗಳ ಪಾತ್ರವನ್ನು ಡಾ. ಮೂರ್ತಿ ಅವರು ವಿವರಿಸಿದ್ದಾರೆ.

ಪೂರ್ಣ ಸೂರ್ಯ ಗ್ರಹಣವನ್ನು ಕುರಿತಂತೆ ನಡೆಸಿರುವ ಸಮಾಜೋ - ಸಾಂಸ್ಕೃತಿಕ ಸಮೀಕ್ಷೆ ಕನ್ನಡ ಜಾನಪದ ಕ್ಷೇತ್ರದಲ್ಲಿ ಹೊಸ ಪ್ರಯತ್ನವಾಗಿದೆ.

**ಈ ಗ್ರಂಥದ ಬಗ್ಗೆ ವಿದ್ವಾಂಸರ ಅಭಿಪ್ರಾಯಗಳು ಇಂತಿವೆ.**

"ಈ ಪುಸ್ತಕ ಮೂರ್ತಿಗಳ ಪರಿಣತ ಅಂತರ್‌ಶಿಸ್ತೀಯ ಅಧ್ಯಯನ.....ಸಾಹಿತ್ಯ, ಧರ್ಮ, ಪುರಾಣ, ಇತಿಹಾಸ, ವಿಜ್ಞಾನ, ಖಗೋಳ ವಿಜ್ಞಾನ, ಜಾನಪದ, ಸಮಾಜ ಶಾಸ್ತ್ರ ಮತ್ತು ಸಂಸ್ಕೃತಿ ಅಧ್ಯಯನ ಹೀಗೆ ನಾನಾ ಶಿಸ್ತುಗಳು ಇಲ್ಲಿ ಬೆರೆತುಕೊಂಡಿವೆ. ಅಂತರ್ ಶಿಸ್ತುಗಳ ವ್ಯಾಸಂಗದಿಂದ ಏನನ್ನು ಸಾಧಿಸಬಹುದು, ಕಂಡುಹಿಡಿಯಬಹುದು ಎನ್ನಲು ಇದೊಂದು ಒಳ್ಳೆಯ ಉದಾಹರಣೆ."

-ಡಾ. ಎನ್.ಎಸ್. ತಾರಾನಾಥ

"ಡಾ. ಮೂರ್ತಿಯವರು ಇದಕ್ಕೆ ಸಂಬಂಧಿಸಿದಂತೆ ಅನೇಕ ಮೂಲಗಳಿಂದ ಸಾಮಗ್ರಿಯನ್ನು ಸಂಗ್ರಹಿಸಿದ್ದಾರೆ.......ಈ ಬಗೆಯ ಸಮಾಜೋ-ಸಾಂಸ್ಕೃತಿಕ ಅಧ್ಯಯನ ಕನ್ನಡದಲ್ಲಿ ಹೆಚ್ಚಾಗಿ ನಡೆದಿಲ್ಲ. ಈ ಅಭ್ಯಾಸದ ನಂತರ ಅವರು ವಿದ್ಯಾವಂತರಲ್ಲಿಯೂ, ಪಟ್ಟಣಿಗರಲ್ಲಿಯೂ ಗ್ರಹಣದ ಬಗ್ಗೆ ಮೂಢನಂಬಿಕೆಗಳು ಇರುವುದನ್ನು ಗುರುತಿಸಿದ್ದಾರೆ. ಪತ್ರಿಕೆ, ರೇಡಿಯೋ, ಟಿ.ವಿ. ಮೊದಲಾದ ಸಮೂಹ ಮಾಧ್ಯಮಗಳಲ್ಲಿಯೂ ಮೌಢ್ಯವನ್ನು ಪ್ರಸಾರ ಮಾಡಿದ ಸಂಗತಿಗಳ ಕಡೆಗೂ ಗಮನ ಸೆಳೆದಿದ್ದಾರೆ. ಈ ಬಗೆಯ ಗ್ರಂಥ ವಿದ್ವತ್ತಿನ ದೃಷ್ಟಿಯಿಂದ ಮಾತ್ರವಲ್ಲದೆ ಜನಸಾಮಾನ್ಯರಿಗೆ ತಿಳುವಳಿಕೆ ಕೊಡುವ ದೃಷ್ಟಿಯಿಂದಲೂ ಉಪಯುಕ್ತವಾದುದು."

-ಡಾ. ತೀ. ನಂ. ಶಂಕರನಾರಾಯಣ

"ಪೂರ್ಣ ಸೂರ್ಯ ಗ್ರಹಣವು ವಿಜ್ಞಾನ, ಶಾಸನ, ಜಾನಪದ, ಇತಿಹಾಸ, ಸಾಹಿತ್ಯ, ಮನೋವಿಜ್ಞಾನ, ಮಾನವ ವಿಜ್ಞಾನ, ಸಮಾಜ ವಿಜ್ಞಾನಗಳ ಹಿನ್ನೆಲೆಯಲ್ಲಿ ಮೂರ್ತಿಗಳಿಂದ ರಚಿಸಲ್ಪಟ್ಟ ವಿಶಿಷ್ಟ ಕೃತಿ. ಗ್ರಹಣ-ಪೂರ್ಣ ಗ್ರಹಣಗಳು ಸಾಮಾನ್ಯವೆಂಬಂತೆ ನಾವು ಭಾವಿಸಿದರೂ ಡಾ. ಮೂರ್ತಿಗಳೂ ನಮ್ಮೆಲ್ಲರ ಕ್ಷಣದ ಅಭಿವ್ಯಕ್ತಿಯನ್ನು ಲೇಖನ ರೂಪದಲ್ಲಿ ಹಿಡಿದಿಟ್ಟಿರುವರು. ಅನೇಕ ಮೂಲಗಳಿಂದ ಮುಖ್ಯವಾಗಿ ಯಂತ್ರ-ಮಂತ್ರಗಳ ಕಡೆಗೂ ಗಮನ ಹರಿಸಿ ಮಾಹಿತಿ ಸಂಗ್ರಹಿಸಿರುವರು. ........ಸಾಮಾಜಿಕ, ಧಾರ್ಮಿಕವಾಗಿ ಈ ಗ್ರಂಥ ಹೆಚ್ಚಿನ ಬೆಳಕನ್ನು ಚೆಲ್ಲಿದೆ."

-ದೇವರ ಕೊಂಡಾರೆಡ್ಡಿ

**ಪಗರಣ(೧೯೮೪)**

ಜಾನಪದ ಶಾಸ್ತ್ರ ಕ್ಷೇತ್ರದಲ್ಲಿ ಚಿದಾನಂದಮೂರ್ತಿಯವರು ಹೊರ ತಂದಿರುವ ಮೂರನೆಯ ಕೃತಿ ಇದು. ಇಲ್ಲಿ ಒಟ್ಟು ಹತ್ತೊಂಬತ್ತು ಸಂಪ್ರಬಂಧಗಳಿವೆ.

ಪಗರಣ, ಗುಲಾಮಗಿರಿ ಮಾರಾಟ, ಮೈಲಾರ ಮಾಳಚಿ ಎಂಬ ಜಾನಪದ ದೈವಗಳು, ಕುಪ್ಪ ಕುರಿ ಎಂಬ ಮಕ್ಕಳ ಆಟ ಇಲ್ಲೆಲ್ಲ ಹಿಂದಿನ ಕನ್ನಡ ಸಾಹಿತ್ಯ, ಶಾಸನಗಳಲ್ಲಿ ಕಂಡು ಬರುವ ವಿಪುಲ ಜಾನಪದ ಸಾಮಗ್ರಿಯನ್ನು ಬಳಸಿಕೊಳ್ಳುವ ವಿಧಾನ ಕಾಣುತ್ತದೆ. ಇಂದಿನ ಕಾಲದ ಹಬ್ಬಗಳನ್ನು ಕುರಿತಂತೆ ಅಧ್ಯಯನ ಮಾಡಬಯಸುವವರಿಗೆ ಒಂದು ಸೈದ್ಧಾಂತಿಕ ಚೌಕಟ್ಟು ಸಂಕ್ಷಿಪ್ತ ರೀತಿಯಲ್ಲಿ ದೊರಕುತ್ತದೆ. ಪ್ರಸ್ತುತ ಹಬ್ಬಗಳ ಹಿಂದೆ ಪ್ರಾಚೀನತೆ ಎಂಬ ಬರೆಹದಲ್ಲಿ ಜಾನಪದ ಶಾಸ್ತ್ರವು ನಿಜವಾದ ಅರ್ಥದಲ್ಲಿ ಅಂತರ ಶಾಸ್ತ್ರೀಯವಾಗಿ ಪರಿಣಮಿಸಬಲ್ಲ ರೀತಿ ಯಾವುದು ಎಂಬುದಕ್ಕೆ 'ಕಬ್ಬಿಣ'ದ ಬಗ್ಗೆ ಬಂದಿರುವ ಬರೆಹ ಒಂದು ಅಪೂರ್ವ ನಿದರ್ಶನವಾಗುತ್ತದೆ. ಒಂದು ಅಪೂರ್ವ ಜಾನಪದ ದುರಂತ ಗೀತದ ಬಗ್ಗೆ ಬರೆಯುವಾಗ ಅಖಿಲ ಭಾರತೀಯವಾದ ಕೆಲವು ಸೈದ್ಧಾಂತಿಕ ಸಮಸ್ಯೆಗಳನ್ನು ಚಿದಾನಂದಮೂರ್ತಿಯವರು ಎತ್ತಿದ್ದಾರೆ. ಜಗ್ಗಲಗೆ ವಾದ್ಯ ಮೇಳ ಎಂಬ ಲೇಖನವು ಜಗ್ಗಲಗೆಯ ಮೇಳ ಮತ್ತು ಐತಿಹ್ಯಗಳಿಗೆ ಸಂಬಂಧ ಪಟ್ಟಿದೆ. ಸುಡುಗಾಡು ಸಿದ್ದರು ಎಂಬ ಲೇಖನವು ಒಂದು ಬುಡಕಟ್ಟು ಜನಾಂಗಕ್ಕೆ ಸಂಬಂಧಪಟ್ಟ ಲೇಖನವಾಗಿದೆ. ಈ ಎಲ್ಲ ಲೇಖನಗಳಿಗೆ ಹಿನ್ನೆಲೆಯಾಗಿದ್ದದ್ದು ಸಾಮಾಜಿಕ ಮತ್ತು ಸಾಂಸ್ಕೃತಿಕ ಮೌಲ್ಯಗಳು.

ಜಾನಪದ ಶಾಸ್ತ್ರದಲ್ಲಿ ಸಾಮಗ್ರಿ ಸಂಗ್ರಹದ ಜೊತೆ ಜೊತೆಗೇ ಸಂಶೋಧನೆ ಮತ್ತು ವ್ಯಾಖ್ಯಾನ ನಡೆಸುವಲ್ಲಿ ಈ ಸಂಕಲನದ ಸಂಪ್ರಬಂಧಗಳು ಯಶಸ್ವಿಯಾಗಿವೆ.

## ಛಂದಸ್‌ಶಾಸ್ತ್ರ

**ಛಂದೋತರಂಗ (೧೯೯೪)**

ಛಂದಸ್ಸಿನ ಅಧ್ಯಯನಕ್ಕೆ ಸಂಬಂಧಿಸಿದ ಇಪ್ಪತ್ತೈದು ಸಂಪ್ರಬಂಧಗಳ ಸಂಕಲನವಿದು. ಕರ್ನಾಟಕ ವಿಷಯ ಜಾತಿಗಳನ್ನು ಮೊದಲು ಮಾಡಿಕೊಂಡು ನವೋದಯ ಕಾವ್ಯಗಳಲ್ಲಿ ಛಂದಸ್ಸಿನ ಪ್ರಯೋಗಗಳ ವಿವೇಚನೆ ಇಲ್ಲಿದೆ. ಮೊದಲ ಲೇಖನದಲ್ಲಿ ಕರ್ನಾಟಕ ವಿಷಯ ಜಾತಿಗಳಾದ ಏಳೆ, ತ್ರಿಪದಿ, ಚೌಪದಿಕೆ, ಗೀತಿಕೆ, ಷಟ್ಪದಿ, ಮದನವತಿ, ಛಂದೋವತಂಸ, ಅಕ್ಕರ, ಅಕ್ಕರಿಕೆ, ಉತ್ಸಾಹಗಳ ಉಗಮದ ಚರ್ಚೆಯಿಂದ ಆರಂಭವಾಗಿದೆ. ಅವುಗಳ ಲಕ್ಷಣ, ಸ್ವರೂಪ ಅವುಗಳ ಬೆಳವಣಿಗೆಯಲ್ಲಿ ಕಂಡುಬರುವ ಮಾರ್ಪಾಟುಗಳನ್ನು ದೀರ್ಘವಾಗಿ ವಿವೇಚಿಸಿದ್ದಾರೆ. ಅಂಶಗಣಗಳು ಮಾತ್ರಾಗಣಗಳಾದ ಬಗ್ಗೆ ಕೆಲವು ವಿಚಾರ ಗಳನ್ನು ಮೂರ್ತಿಯವರು ವ್ಯಕ್ತಪಡಿಸಿದುದು ಉಚಿತವಾಗಿದೆ.

ಕೆಲವು ಕೃತಿಗಳ ಛಂದಸ್ಸನ್ನು ಕುರಿತ ಐದು ಬರೆಹಗಳಿವೆ. ಚಂದ್ರರಾಜನ 'ಮದನ ತಿಲಕ'ದಲ್ಲಿ ಕೆಲವು ಕನ್ನಡ ವೃತ್ತಗಳ ಬಗ್ಗೆ ವಿವೇಚಿಸಿದ್ದಾರೆ. ಬಸವಣ್ಣನವರ ವಚನಗಳಲ್ಲಿ ಛಂದೋಲಯವನ್ನು, ಮತಂಗದ 'ಬೃಹದ್ದೇಶಿ'ಯ ಛಂದಸ್ಸನ್ನು ಕುರಿತ ಎರಡು ಬರೆಹಗಳಿವೆ. ವಚನ ಸಾಹಿತ್ಯದ ಉಗಮ, ಹರಿಹರನ ಎರಡು ಪದ್ಯಗಳ ಬಗ್ಗೆ ಒಂದು ಟಿಪ್ಪಣಿ - ಈ ಲೇಖನದಲ್ಲಿ ಛಂದಸ್ಸಿನ ಕೆಲವು ಅಂಶಗಳನ್ನು ಚರ್ಚಿಸಿದ್ದಾರೆ.

ಒನಕೆವಾಡು-ಒಂದು ವಿವೇಚನೆ, 'ಲಯಗ್ರಾಹಿ' ಮತ್ತು 'ಲಯೋತ್ತರ' ತ್ರಿಪದಿ ಅದರ ಸ್ವರೂಪ ಮತ್ತು ಇತಿಹಾಸ ಇಂತಹ ಛಂದ: ಪ್ರಭೇದಗಳ ಬಗ್ಗೆ ಬರೆದ ಮೂರು ಬರೆಹಗಳಿವೆ. ಲಯಗ್ರಾಹಿ ಮತ್ತು ಲಯೋತ್ತರವು ಒಂದು ಉಪಾದೇಯ ಲೇಖನವಾದರೆ, ತ್ರಿಪದಿಯ ಬಗ್ಗೆ ಬರೆದಿರುವುದು ಒಂದು ಮೌಲಿಕ ಸಂಶೋಧನೆಯಾಗಿದೆ. ಉಯ್ಯಾಲೆಗಣ ಇರುವುದನ್ನು ಸಾಬೀತು ಪಡಿಸುವ ಎರಡು ಲೇಖನಗಳಿವೆ. ತೀ. ನಂ. ಶ್ರೀಯವರ ಛಂದೋ ವಿಚಾರಗಳನ್ನು ಹೇಳುವ ಒಂದು ಬರೆಹವಿದೆ.

ಹೊಸಗನ್ನಡ ಛಂದಸ್ಸಿಗೆ ಸಂಬಂಧಿಸಿದಂತೆ ಐದು ಬರೆಹಗಳಿವೆ. ರಗಳೆ, ಸರಳ ರಗಳೆ ಮತ್ತು ಮಹಾಛಂದಸ್ಸು ಎಂಬ ಲೇಖನದಲ್ಲಿ ಸರಳ ರಗಳೆಯ ಅದರ ಅಪೂರ್ವ ಪ್ರಯೋಗಕ್ಕಾಗಿ ಮಹಾಛಂದಸ್ಸು ಎಂಬ ಹೆಸರು ಕೊಡುವುದು ಅನಗತ್ಯವೆಂಬುದು ಚಿದಾನಂದಮೂರ್ತಿಯವರ ನಿಲುವಾಗಿದೆ. ಸರಳ ರಗಳೆಯ ಇತಿಹಾಸದ ಬಗ್ಗೆ ಒಂದು ಸಣ್ಣ ತಪ್ಪು ಕಲ್ಪನೆ ಎಂಬ ಲೇಖನವಿದೆ. 'ಛಂದಸ್ಸಿನ ಪ್ರಯೋಗಗಳು : ನವೋದಯ ಕಾವ್ಯದಲ್ಲಿ' ಎಂಬುದು ಮೌಲಿಕ ಲೇಖನವಾಗಿದೆ. ಕಣವಿಯವರ ಛಂದಸ್ಸನ್ನು ಕುರಿತು ಬರೆದ ಒಂದು ಲೇಖನವಿದೆ. ಛಂದೋತರಂಗದ ಎಲ್ಲ ಲೇಖಗಳಲ್ಲಿಯೂ ಸಮಂಜಸವಾದ, ವಿಶ್ವಸನೀಯವಾದ ವಿವೇಚನೆ ಇದೆ. ಅವು ಶೋಧನೆಯ ಬೆಳಕನ್ನು, ಒಳನೋಟವನ್ನು ಕೊಡುತ್ತವೆ.

ಡಾ. ಚಿದಾನಂದಮೂರ್ತಿಯವರ ಸಾಹಿತ್ಯ ಸಂಪತ್ತು ಅಪಾರವಾದದ್ದು. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನದ ಮೂಲಕ ಶಾಸನ ಕ್ಷೇತ್ರಕ್ಕೆ; ಭಾಷಾ ವಿಜ್ಞಾನದ ಮೂಲ ತತ್ವಗಳು, ವಾಗರ್ಥಗಳ ಮೂಲಕ ಭಾಷಾವಿಜ್ಞಾನ ಕ್ಷೇತ್ರಕ್ಕೆ; ಬಸವಣ್ಣನವರು, ವಚನ ಸಾಹಿತ್ಯ, ಶೂನ್ಯ ಸಂಪಾದನೆಯನ್ನು ಕುರಿತು, ಲಿಂಗಾಯತ ಅಧ್ಯಯನಗಳು, ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆಗಳ ಮೂಲಕ ಸಾಹಿತ್ಯ ಕ್ಷೇತ್ರಕ್ಕೆ; ಗ್ರಾಮೀಣ, ಪಗರಣ ಮತ್ತು ಪೂರ್ಣ ಸೂರ್ಯ ಗ್ರಹಣಗಳ ಮೂಲಕ ಜಾನಪದ ಶಾಸ್ತ್ರದ ಕ್ಷೇತ್ರಕ್ಕೆ; ಛಂದೋತರಂಗದ ಮೂಲಕ ಛಂದಶಾಸ್ತ್ರಕ್ಕೆ ತಮ್ಮ ಕಾಣಿಕೆ ಸಲ್ಲಿಸಿದ್ದಾರೆ. ಹಲವಾರು ಕನ್ನಡ, ಆಂಗ್ಲ ಲೇಖನಗಳು, ಸಂಪ್ರಬಂಧಗಳು ವಿಮರ್ಶೆಗಳು ಬೇರೆ-ಬೇರೆ ಪತ್ರಿಕೆ ಸಂಪುಟಗಳಲ್ಲಿ ಬೆಳಕು ಕಂಡಿವೆ.

ಡಾ. ಜಿ.ಎಸ್. ಶಿವರುದ್ರಪ್ಪನವರು ಹೇಳಿರುವಂತೆ "ಸಾಹಿತ್ಯಕ, ಚಾರಿತ್ರಿಕ, ಸಾಂಸ್ಕೃತಿಕ ಕ್ಷೇತ್ರವನ್ನು ಅಗೆಯುತ್ತ ಹೊರಟ ಈ ಸಂಶೋಧಕರ ಗುದ್ದಲಿಗೆ ಸಿಕ್ಕ ಹೊರಬಿದ್ದ ಈ ವಸ್ತು ವೈವಿಧ್ಯ ವಿಶೇಷ ರೀತಿಯದಾಗಿದೆ. ಒಂದು ಶಬ್ದ ನಿಷ್ಪತ್ತಿಯಲ್ಲಿ ತೊಡಗುವ, ಒಂದು ಜನಾಂಗ ಹಾಗೂ ಭಾಷೆಯನ್ನು ಪರಿಶೀಲಿಸುವ ಒಬ್ಬ ವ್ಯಕ್ತಿಯ ಜೀವನವನ್ನು ಪುನರ್ ನಿರ್ಮಿಸುವ ಒಬ್ಬ ಕವಿಯ ಅಥವಾ ಒಂದು ಸಾಹಿತ್ಯ ನಿರ್ಮಿತಿಯನ್ನು ವಿವೇಚಿಸಿ ನೋಡುವ ವಿವಿಧ ಬೌದ್ಧಿಕ ಸಾಹಸಗಳನ್ನು ಇಲ್ಲಿ ಕಾಣಬಹುದಾಗಿದೆ." ಡಾ. ಶಿವರುದ್ರಪ್ಪನವರ ಅಭಿಪ್ರಾಯಗಳು ಡಾ. ಚಿದಾನಂದಮೂರ್ತಿಯವರ ಒಟ್ಟು ಸಂಶೋಧನೆಗೆ ಅನ್ವಯ ವಾಗುತ್ತವೆ. ತೀ. ನಂ. ಶ್ರೀ. ಡಿ.ಎಲ್.ಎನ್. ಅವರು ಹಾಕಿಕೊಟ್ಟ ಸಂಶೋಧನೆಯ ಪರಂಪರೆಯನ್ನು ಚಿದಾನಂದಮೂರ್ತಿಯವರು ಹೊಸ ಹೊಸ ರಚನಾ ವಿಧಾನಗಳನ್ನು ಗಮನದಲ್ಲಿಟ್ಟುಕೊಂಡು ಸಮರ್ಥವಾಗಿ ಮುಂದುವರೆಸಿಕೊಂಡು ಹೋದರು ಎಂಬುದು ಮೆಚ್ಚಬೇಕಾದ ಸಂಗತಿ.

ಕನ್ನಡ ನಾಡು ಡಾ. ಎಂ. ಚಿದಾನಂದಮೂರ್ತಿಯವರ ವ್ಯಕ್ತಿತ್ವ ಮತ್ತು ಸಾಧನೆಗೆ ಉಚಿತವಾದ ಗುಣಮಟ್ಟದ 'ಸಂಶೋಧನ' ಎಂಬ ಬೃಹತ್ ಅಭಿನಂದನ ಗ್ರಂಥವನ್ನು ಅರ್ಪಿಸಿ ಮತ್ತು ಸಂಶೋಧಕರಿಗೆ ಪ್ರೋತ್ಸಾಹ ನೀಡಲು ಅವರ ಹೆಸರಿನಲ್ಲಿ 'ಚಿದಾನಂದ ಪ್ರಶಸ್ತಿ' ಯನ್ನು ಸ್ಥಾಪಿಸಿ ತನ್ನ ಗೌರವವನ್ನು ಸಲ್ಲಿಸಿದೆ.

# ಸಂಶೋಧನೆಯ ವಿಧಾನ

ಡಾ. ಎಂ. ಚಿದಾನಂದಮೂರ್ತಿಯವರ ಸಂಶೋಧನಾ ವಿಧಾನ ಮೂರು ರೀತಿಯದಾಗಿದೆ. ಕ್ಷೇತ್ರ ಕಾರ್ಯ ಮತ್ತು ಕ್ಷೇತ್ರ ಸಂಶೋಧನೆ, ಅನ್ವಯಿಕ ಸಂಶೋಧನೆ ಮತ್ತು ವರ್ಣನಾತ್ಮಕ ಸಂಶೋಧನೆ ಎಂಬ ಮೂರು ರೀತಿಯ ಸಂಶೋಧನೆಯ ವಿಧಾನಗಳನ್ನು ಉಪಯೋಗಿಸಿಕೊಂಡಿದ್ದಾರೆ.

ಸಂಶೋಧನೆಯ ಮೊದಲ ಹೆಜ್ಜೆ ಸಮಸ್ಯೆಗಳನ್ನು ಆಯ್ದುಕೊಳ್ಳುವುದು. ಆ ವೇಳೆಯಲ್ಲಿ ಡಾ. ಚಿದಾನಂದಮೂರ್ತಿಯವರು ತುಂಬ ಎಚ್ಚರಿಕೆ ವಹಿಸುತ್ತಾರೆ. ಯಾವ ಕ್ಷೇತ್ರದಲ್ಲಿ ಕೆಲಸ ಆಗಿಲ್ಲ? ಎಲ್ಲಿ ಸಮಸ್ಯೆಗಳಿವೆ? ಆ ಸಮಸ್ಯೆ ಬಿಡಿಸಲಿಕ್ಕೆ ಎಷ್ಟು ಜನ ಕೆಲಸ ಮಾಡಿದ್ದಾರೆ? ಅವು ಸಫಲವಾಗಿವೆಯೆ? ಮುಂತಾದ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಸಮಸ್ಯೆಗೆ ಕೈ ಹಾಕುತ್ತಾರೆ. ಅವರ ಬಹುಪಾಲು ಕೃತಿಗಳು, ಸಂಪ್ರಂಬಧಗಳು ಆಯಾ ಕ್ಷೇತ್ರದಲ್ಲಿ ಪ್ರಥಮ ಪ್ರಯತ್ನಗಳಾಗಿವೆ. ಉದಾ : ಅವರ ಮೇರು ಕೃತಿ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಪ್ರಥಮ ಬಾರಿಗೆ ಕನ್ನಡ ಶಾಸನಗಳನ್ನು ಕುರಿತು ಸಾಂಸ್ಕೃತಿಕ ಅಧ್ಯಯನವಾದರೆ 'ಶೂನ್ಯ ಸಂಪಾದನೆಯನ್ನು ಕುರಿತು' ಶೂನ್ಯ ಸಂಪಾದನೆಯ ಬಗೆಗೆ ಹೇಳ ಹೊರಟ ಮೊದಲ ಕೃತಿಯಾಗಿದೆ. ವಾಗರ್ಥ, ಗ್ರಾಮೀಣ, ಮತ್ತು ಪಗರಣದಲ್ಲಿಯ ಸಂಪ್ರಬಂಧಗಳು ಮೊಟ್ಟಮೊದಲು ಆಯಾ ಸಮಸ್ಯೆಯ ಮೇಲೆ ಹೊಸ ಬೆಳಕನ್ನು ಬೀರುತ್ತವೆ.

ಆರಿಸಿಕೊಂಡ ಸಮಸ್ಯೆಯನ್ನು ಬಿಡಿಸಲಿಕ್ಕೆ ನಾನಾ ಮೂಲಗಳನ್ನಾಧರಿಸಿ 'ಸಾಮಗ್ರಿ ಸಂಗ್ರಹ ಕಾರ್ಯ'ದಲ್ಲಿ ಚಿದಾನಂದಮೂರ್ತಿಯವರು ತೊಡಗುವ ರೀತಿ ಅನುಕರಣೀಯ. ಒಂದೆಡೆ Table work. ಇನ್ನೊಂದೆಡೆ Field work. ಎರಡು ಜೊತೆ ಜೊತೆಯಾಗಿಯೇ ಸಾಗುತ್ತವೆ. ಆ ವೇಳೆಯಲ್ಲಿ ಅವರು ಅಪಾರ ದೈಹಿಕ ಮತ್ತು ಮಾನಸಿಕ ಶ್ರಮ ತೆಗೆದುಕೊಳ್ಳುತ್ತಾರೆ.

ಭಾಷಾಶಾಸ್ತ್ರ, ಸಾಹಿತ್ಯ, ಶಾಸನ, ಮತ್ತು ಜಾನಪದ ಮುಂತಾದ ಕ್ಷೇತ್ರಗಳಿಗೆ ಸಂಬಂಧಿಸಿದ ಮೂಲಭೂತ ಸಮಸ್ಯೆಗಳನ್ನು ಬಿಡಿಸುವಾಗ ಅವರಿಗೆ ಕ್ಷೇತ್ರಕಾರ್ಯ ಅನಿವಾರ್ಯವೆಂದು ತೋರಿರಬೇಕು. ಸತ್ಯಶೋಧನೆಗಾಗಿ ಮೂಲ ನೆಲೆಗೆ ಹೋಗಿ ಸತ್ಯದ ಸೆಲೆಯನ್ನು ಗುರುತಿಸಬೇಕಾದರೆ ಕ್ಷೇತ್ರಕಾರ್ಯ ಅವಶ್ಯ.

ಡಾ. ಚಿದಾನಂದಮೂರ್ತಿಯವರು ಕ್ಷೇತ್ರಕಾರ್ಯಕ್ಕೆ ಹೋಗುವುದಕ್ಕಿಂತ ಮುಂಚೆ ತಾವು ಆಯ್ದುಕೊಂಡ ಸಮಸ್ಯೆಯ ಬಗ್ಗೆ ಒಂದು 'ಸಂಶೋಧನಾ ನಕ್ಷೆ' ಅವರ ಮನಸ್ಸಿನಲ್ಲಿ ರೂಪು ತಾಳುತ್ತಿರಬೇಕು. ಕ್ಷೇತ್ರಕಾರ್ಯಕ್ಕೆ ಹೋದಾಗ ಅನೇಕ ಸಾಧನ- ತಂತ್ರಗಳಿಂದ ಸಾಮಗ್ರಿಗಳನ್ನು ಸಂಗ್ರಹಿಸುತ್ತಾರೆ. ಆ ವೇಳೆಯಲ್ಲಿ ಅವರು ತಾಳ್ಮೆ, ಮಾನಸಿಕ ಸಮತೋಲನವನ್ನು ಕಳೆದುಕೊಳ್ಳುವುದಿಲ್ಲ. ಸಾಮಗ್ರಿ ಸಂಗ್ರಹದ ಸಹಾಯದಿಂದ ತಮ್ಮ ಸಮಸ್ಯೆಗೆ ಪರಿಹಾರವನ್ನು 'ಊಹೆ' ಮಾಡುತ್ತಾರೆ. ಸಮರ್ಪಕ ಪರಿಹಾರ ಸಿಗುವವರೆಗೂ ಸಂದೇಹದಿಂದಲೆ ನೋಡುತ್ತಾ, ಮಾನಸಿಕ ಹಿಂದೇಟು ಹಾಕುತ್ತಾ ಉತ್ತಮವಾದುದನ್ನೇ ಹೆಕ್ಕಿ ತೆಗೆಯುತ್ತಾರೆ. ವಾಗರ್ಥ, ಗ್ರಾಮೀಣ, ಪಗರಣ, ಪೂರ್ಣಸೂರ್ಯಗ್ರಹಣ ಮುಂತಾದ ಅವರ ಬಹುಪಾಲು ಬರಹಗಳಿಗೆ ಕ್ಷೇತ್ರ ಸಮೀಕ್ಷೆ ಮತ್ತು ಕ್ಷೇತ್ರಕಾರ್ಯಗಳ ಹಿನ್ನೆಲೆ ಇದೆ.

ದುಂಬಿಯಂತೆ ವಿಷಯ ಸಂಗ್ರಹ ಮಾಡಿ ಡಾ. ಚಿದಾನಂದಮೂರ್ತಿಯವರು ಜ್ಞಾನಿಯಂತೆ ವಿಶ್ಲೇಷಿಸುತ್ತಾರೆ. ಆಗ ಮೂಡಿ ಬರುತ್ತದೆ 'ಅಂತರ್ ಶಿಸ್ತೀಯ ಅಧ್ಯಯನ'. ತಾವು ಆರಿಸಿಕೊಂಡ ವಿಷಯಕ್ಕೆ ತಕ್ಕಂತೆ ಇತರ ವಿಷಯಗಳ ಶಿಸ್ತನ್ನು ಪೂರಕವಾಗಿ ಬಳಸಿಕೊಳ್ಳುವ ವಿಧಾನವಿದು. ಅವರ ಮೊದಲ ಲೇಖನ 'ಪಂಪಕವಿ ಮತ್ತು ಮೌಲ್ಯ ಪ್ರಸಾರ'ದಲ್ಲಿ ಅಂತರ್‌ಶಿಸ್ತೀಯ ಅಧ್ಯಯನದ ಸುಳಹು ನಮಗೆ ತಿಳಿದು ಬರುತ್ತದೆ. ಸಾಹಿತ್ಯ ಶಿಸ್ತಿಗೆ ಇತಿಹಾಸದ ಶಿಸ್ತನ್ನು ಅಳವಡಿಸಲು ಪ್ರಯತ್ನಿಸಿದ್ದಾರೆ. ಶಾಸನಗಳಿಂದ ಸಾಹಿತ್ಯ, ಸಾಹಿತ್ಯದಿಂದ ಸಂಸ್ಕೃತಿಯನ್ನು ಹೇಳಹೊರಟ ಅವರ ಮೇರುಕೃತಿ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಅಂತರ್ ಶಿಸ್ತೀಯ ಅಧ್ಯಯನದಿಂದ ಕೂಡಿದೆ. ಸಂಶೋಧ ತರಂಗ ೧ ಮತ್ತು ೨ ಸಂಪುಟಗಳ ಲೇಖನಗಳಲ್ಲಿ ಈ ರೀತಿಯ ಅಧ್ಯಯನವನ್ನು ನಾವು ಗುರುತಿಸಬಹುದಾಗಿದೆ.

ಭಾಷಾ ವಿಜ್ಞಾನದ ಸಂಪ್ರಬಂಧಗಳನ್ನು ಒಳಗೊಂಡ ವಾಗರ್ಥ ಕೃತಿಯಲ್ಲಿಯ ಲೇಖನಗಳು ಭಾಷೆಯನ್ನು ಕುರಿತು ವಿಶ್ಲೇಷಿಸುತ್ತಾ ಸಾಹಿತ್ಯ, ಸಂಸ್ಕೃತಿ ಮತ್ತು ಇತಿಹಾಸವನ್ನು ಕುರಿತು ಅರ್ಥೈಸುತ್ತವೆ. ಮೂರ್ತಿಯವರು ಭಾಷೆಯನ್ನು ಸಾಮಾಜಿಕ ಚೌಕಟ್ಟಿನಲ್ಲಿ ನೋಡುತ್ತಾರೆ, ವಿಶ್ಲೇಷಿಸುತ್ತಾರೆ. ಅವರ ಭಾಷಾಶಾಸ್ತ್ರ ಬರಹಗಳಿಗೆ ಸಾಹಿತ್ಯ, ಶಾಸನ, ಸಂಸ್ಕೃತಿ ಮತ್ತು ಜಾನಪದ ಅಂಟಿಕೊಂಡೇ ಇರುತ್ತದೆ. ಅಂತರ್‌ಶಿಸ್ತೀಯ ಅಧ್ಯಯನಗಳಿಂದ ಕೂಡಿದ ಅವರ ಬರಹಗಳು ಹೊಸತನವನ್ನು ಕಂಡಿವೆ ಮತ್ತು ಸಮಗ್ರತೆಯನ್ನು ಪಡೆದುಕೊಂಡಿವೆ.

'ಗ್ರಾಮೀಣ', 'ಪಗರಣ'ಗಳ ಸಂಪ್ರಂಬಧಗಳು ಅಂತರ್‌ಶಿಸ್ತೀಯ ಅಧ್ಯಯನದಿಂದಲೇ ಕೂಡಿವೆ. ಜಾನಪದ ಅನೇಕ ವಿಷಯಗಳನ್ನು ಒಳಗೊಂಡ ಕ್ಷೇತ್ರ. ಸಹಜವಾಗಿಯೇ ಅಂತರ್‌ಶಿಸ್ತಿನ ಅಧ್ಯಯನಕ್ಕೆ ಕೇಂದ್ರವಾಗಿದೆ. ಪಗರಣದಲ್ಲಿಯ 'ಜಾನಪದ ಶಾಸ್ತ್ರದಲ್ಲಿ ಅಂತರ್ ಶಿಸ್ತೀಯ ಅಧ್ಯಯನ-'ಕಬ್ಬಿಣ'ದ ಒಂದು ನಿದರ್ಶನ' ಎಂಬ ಲೇಖನವಂತೂ ಅಂತರ್ ಶಿಸ್ತಿನ ಅಧ್ಯಯನಕ್ಕೆ ಅತ್ಯುತ್ತಮ ಮಾದರಿಯಾಗಿದೆ. ಕಬ್ಬಿಣದ ಬಗ್ಗೆ ಕರ್ನಾಟಕದಲ್ಲಿ,

ತಮಿಳುನಾಡಿನಲ್ಲಿ, ಕರ್ನಾಟಕದ ಜಾನಪದ ವೈದ್ಯರಲ್ಲಿ, ಉತ್ತರಭಾರತದಲ್ಲಿ, ಹೊರ ದೇಶದಲ್ಲಿ, ಯಾವ-ಯಾವ ನಂಬಿಕೆಗಳಿವೆ ಎಂಬುದನ್ನು ಚಿದಾನಂದಮೂರ್ತಿಯವರು ಪಟ್ಟಿ ಮಾಡುತ್ತಾರೆ. ಸಾಂಸ್ಕೃತಿಕ ಮಾನವಶಾಸ್ತ್ರದಲ್ಲಿ ಕಬ್ಬಿಣದ ಬಗ್ಗೆ ನಡೆದಿರುವ ಸಂಶೋಧನೆಯನ್ನು ಒದಗಿಸುತ್ತಾರೆ, ಕಬ್ಬಿಣದ ಬಗ್ಗೆ ಭಾಷಾಶಾಸ್ತ್ರದ ವಿವರಣೆಯನ್ನು ದಾಖಲಿಸುತ್ತಾರೆ. ಕೊನೆಯ ಭಾಗದಲ್ಲಿ ಕಬ್ಬಿಣದ ಬಗ್ಗೆ ಇಷ್ಟೆಲ್ಲ ನಂಬಿಕೆಗಳು ಹುಟ್ಟಿಕೊಳ್ಳಲು ಕಾರಣಗಳನ್ನು ಉದಾಹರಣೆ ಸಹಿತವಾಗಿ ವಿಶ್ಲೇಷಣೆ ಮಾಡುತ್ತಾರೆ. ಜಾನಪದಕ್ಕೆ ಸಂಬಂಧಪಟ್ಟ ಅನೇಕ ಲೇಖನಗಳು ಅಂತರ್‌ಶಿಸ್ತೀಯ ಅಧ್ಯಯನ ವಿಧಾನವನ್ನು ಸ್ಪಷ್ಟವಾಗಿ ಚಿತ್ರಿಸುತ್ತವೆ. ಅವರ 'ಪೂರ್ಣ ಸೂರ್ಯ ಗ್ರಹಣ' ಒಂದು ಸಮಾಜೊ-ಸಾಂಸ್ಕೃತಿಕ ಸಮೀಕ್ಷೆ, 'ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆಯ ಪರಿಕಲ್ಪನೆ' ಗ್ರಂಥಗಳು ಅಂತರ್ ಶಿಸ್ತೀಯ ಅಧ್ಯಯನವನ್ನೊಳಗೊಂಡ ಪೂರ್ಣ ಪ್ರಮಾಣದ ಗ್ರಂಥಗಳಾಗಿವೆ.

ಡಾ. ಚಿದಾನಂದಮೂರ್ತಿಯವರು ಅನೇಕ ಹೊಸ ಹೊಸ ಪದಗಳನ್ನು ಟಂಕಿಸಿ (Coin-age) ಕನ್ನಡ ಶಬ್ದ ಭಂಡಾರ ವಿಕಾಸಕ್ಕೂ ಕಾರಣರಾಗಿದ್ದಾರೆ. Folklore, Research Paper, Bibligraphy, Socio-culture Study, Socio-Religious Study, Identification, Antigueliore, ಆ ಆಂಗ್ಲ ಪದಗಳಿಗೆ ಸಂವಾದಿಯಾಗಿ ಚಿದಾನಂದಮೂರ್ತಿಯವರು ಕನ್ನಡದಲ್ಲಿ ಕ್ರಮವಾಗಿ ಜಾನಪದ ಶಾಸ್ತ್ರ, ಸಂಪ್ರಬಂಧ, ಪ್ರಕೋಶ, ಸಮಾಜೊ-ಸಾಂಸ್ಕೃತಿಕ ಅಧ್ಯಯನ, ಸಮಾಜೊ-ಧಾರ್ಮಿಕ ಅಧ್ಯಯನ, ಅಭಿಜ್ಞೆ, ಪುರಾವಸ್ತುಶಾಸ್ತ್ರ ಮುಂತಾದ ಶಬ್ದಗಳನ್ನು ಟಂಕಿಸಿ ಚಲಾವಣೆಗೆ ತಂದರು. ಅವು ಕೇವಲ ಅನುವಾದಗಳಲ್ಲ. ಪ್ರಬುದ್ಧ ಭಾಷೆಗೆ ಸರಿಸಮಾನವಾಗಿ ನಮ್ಮ ಸಾಮಗ್ರಿಗಳ ಮೂಲಕ ನಡೆಯುವ ಹೊಸ ಸೃಷ್ಟಿಗಳಿವು. ಇದು ಕನ್ನಡ ಭಾಷೆಯ ಆಧುನೀಕರಣ ವಿಧಾನಗಳಲ್ಲಿ ಒಂದಾಗಿದೆ. ಹೊಸ ಹೊಸ ಪದಗಳನ್ನು ಟಂಕಿಸಿ ಬಳಕೆಗೆ ಬರುವಂತೆ ಮಾಡಿ ಮಾತ್ರ ಭಾಷೆಯ ಶಬ್ದಭಂಡಾರ ಬೆಳವಣಿಗೆ ಮಾಡುವುದು ಆಧುನೀಕರಣದ ಲಕ್ಷಣವಾಗಿದೆ. ಚಿದಾನಂದಮೂರ್ತಿಯವರು ಈ ಕಾರ್ಯವನ್ನು ಯಶಸ್ವಿಯಾಗಿ ಪೂರೈಸಿದ್ದಾರೆ.

'ಶಬ್ದಾರ್ಥಗಳ ನಿರ್ಣಯದಲ್ಲಿ' ಡಾ. ಚಿದಾನಂದಮೂರ್ತಿಯವರ ಕೊಡುಗೆ ಮಹತ್ವಪೂರ್ಣವಾಗಿದೆ. ಸಬ್ಬಂಗ, ಕೇಳಿಕೆ, ಗುಬ್ಬಚ್ಚಿ, ಮಣಿಪ್ರವಾಳ, ಅಮ್ಮ-ಅಬ್ಬೆ-ಅಲ್ಲಮ-ಬಾದುಬ್ಬೆ, ಕೊಟ್ಟಣ ಹಾಕಿಸು, ಅಂಟಗೆ-ಪಂಟಗೆ, ವರ್ಷದ ತೊಡಕು, ದಂತಕತೆ, ಒಡಪು, ಒಗಟು ಮುಂತಾದ ಶಬ್ದಗಳ ನಿಷ್ಪತ್ತಿಯನ್ನು ಮತ್ತು ಅರ್ಥವನ್ನು ಕುರಿತು ಸಂಶೋಧನ ತರಂಗಗಳು, ವಾಗರ್ಥ, ಗ್ರಾಮೀಣಗಳಲ್ಲಿ ಬಂದಿವೆ. ಶಬ್ದಗಳ ಖಚಿತವಾದ ಅರ್ಥವನ್ನು ಕಲ್ಪಿಸುತ್ತಾರೆ. ತಮ್ಮ ಅಂತರ್‌ದೃಷ್ಟಿಯ ಪಾಂಡಿತ್ಯದಿಂದ ಕನ್ನಡದ ಅನೇಕ ಶಾಬ್ದಿಕ ಸಮಸ್ಯೆಗಳಿಗೆ ಸಮರ್ಪಕ ಪರಿಹಾರ ಕೊಟ್ಟಿದ್ದಾರೆ.

'ಅನ್ವೇಷಣೆಯ ನಿರಂತರತೆ' ಚಿದಾನಂದಮೂರ್ತಿಯವರ ಸಂಶೋಧನ ವಿಧಾನದ ಮಹತ್ವಪೂರ್ಣ ಲಕ್ಷಣವಾಗಿದೆ. ಉದಾ: ಪಗರಣ, ಜೋಕುಮಾರನ ಬಗ್ಗೆ ಇರುವ 'ಗ್ರಾಮೀಣ'ದಲ್ಲಿ ಬರೆದ ಲೇಖನಗಳು ಪರಿಚಯಾತ್ಮಕವಾಗಿವೆ. ಅವೇ ಲೇಖನಗಳು 'ಪಗರಣ' ಮತ್ತು ಇತರ ಸಂಪ್ರಬಂಧಗಳು'ದಲ್ಲಿ ವಿಶ್ಲೇಷಣಾತ್ಮಕವಾಗಿವೆ. ಒಂದು ವಿಷಯಕ್ಕೆ ಸಂಬಂಧಿಸಿದಂತೆ ಒಂದು ಲೇಖನ ಬರೆದ ಮೇಲೆ ಅವರು ಅದನ್ನು ಅಷ್ಟಕ್ಕೆ ಬಿಡುವುದೇ ಇಲ್ಲ. ಅದರ ಬಗ್ಗೆ ಹೊಸ ಹೊಸ ಮಾಹಿತಿಗಳು ದೊರೆತಂತೆಲ್ಲ ವಿಷಯವನ್ನು ಒಂದು ಚೌಕಟ್ಟಿಗೆ ಒಳಪಡಿಸುತ್ತಾರೆ. ಮೊದಲಿನ ಅವರ ನಿರ್ಣಯಗಳು ಬದಲಾವಣೆ ಯಾಗುತ್ತವೆ. ಆಯಾ ವಿಷಯಗಳ ಮೇಲೆ ಹೊಸ ಬೆಳಕು ಚೆಲ್ಲುತ್ತಾರೆ. ಹೊಸದನ್ನು ಶೋಧಿಸಲು ಮೂರ್ತಿಯವರು ಹವಣಿಸುತ್ತಾರೆ.

ಚಿದಾನಂದಮೂರ್ತಿಯವರ ಸಂಶೋಧನೆಯ 'ಭಾಷೆ' 'ವಾಚ್ಯಾರ್ಥ'ದ ಲಕ್ಷಣವನ್ನು ಒಳಗೊಂಡಿದೆ. ತಾವು ಹೇಳಬೇಕಾದ ವಿಷಯವನ್ನು ಸರಳವಾಗಿ, ನೇರವಾಗಿ, ವಸ್ತುನಿಷ್ಠವಾಗಿ, ಖಚಿತವಾಗಿ ಮತ್ತು ನಿರ್ದಿಷ್ಟವಾಗಿ ನಿರೂಪಿಸುತ್ತಾರೆ. ಅವರ ಸಂಪ್ರಬಂಧಗಳಲ್ಲಿರುವ ವಾಕ್ಯಗಳು ಚಿಕ್ಕ ಚಿಕ್ಕವಾಗಿದ್ದು ಹೇಳುವ ವಿಷಯವನ್ನು ಸ್ಪಷ್ಟಪಡಿಸುತ್ತದೆ. ಅವರ ಬರಹಗಳಲ್ಲಿ ವಿಷಯಕ್ಕೆ ಪ್ರಧಾನ ಸ್ಥಾನವಿದೆ ವಿನಃ ಅಲಂಕಾರಿಕ ಭಾಷೆಗಲ್ಲ. ಓದುಗರ ಗಮನವನ್ನು ವಿಷಯದತ್ತ ಡಾ. ಚಿದಾನಂದಮೂರ್ತಿಯವರು ಸೆಳೆಯುತ್ತಾರೆ. ಗೊಂದಲರಹಿತವಾದ, ಅರ್ಥವತ್ತಾದ ಪರಿಣಾಮಕಾರಿಯಾದ ಭಾಷೆಯವರದು.

ಡಾ. ಎಂ. ಚಿದಾನಂದಮೂರ್ತಿಯವರು ಕನ್ನಡ ಸಂಶೋಧನೆಗೆ ವಿಧಿ-ವಿಧಾನಗಳನ್ನು ವೈಜ್ಞಾನಿಕ ತಳಹದಿಯ ಮೇಲೆ ರೂಪಿಸಿ ಅದಕ್ಕೆ ಭದ್ರ ಬುನಾದಿ ಯನ್ನು ಹಾಕಿ ಹೊಸ ಸಂಶೋಧನಾ ಮಾರ್ಗದ ಪ್ರವರ್ತಕರಾದರು. "ಪ್ರಪಂಚದ ಶ್ರೇಷ್ಠ ಸಂಶೋಧಕರ ಪಂಕ್ತಿಯಲ್ಲಿ ಚಿದಾನಂದಮೂರ್ತಿಯವರು ಒಬ್ಬರು. ಅವರದು ಕನ್ನಡ ಸಂಶೋಧನೆಯಲ್ಲಿ ಯುಗಪ್ರವರ್ತಕ ಹೆಸರು" ಎಂಬ ನನ್ನ ಕೊನೆಯ ಹೇಳಿಕೆ ಉತ್ಪ್ರೇಕ್ಷೆಯಲ್ಲ, ಸ್ವಭಾವೋಕ್ತಿಯಾಗಿದೆ.

## ಅನುಬಂಧ – ೧

## ಡಾ. ಎಂ. ಚಿದಾನಂದಮೂರ್ತಿಯವರ ಕೃತಿಗಳು

೧೯೬೨ (ಪ್ರ. ಮು) ಶೂನ್ಯ ಸಂಪಾದನೆಯನ್ನು ಕುರಿತು. ೧೯೯೦ (ತೃ. ಮು)

೧೯೬೫ (ಪ್ರ. ಮು) ಭಾಷಾವಿಜ್ಞಾನದ ಮೂಲತತ್ವಗಳು ೧೯೮೬ (ತೃ. ಮು)

೧೯೬೬ (ಪ್ರ.ಮು) ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ೧೯೭೪ (ದ್ವಿ. ಮು)

೧೯೬೭ ಸಂಶೋಧನತರಂಗ ಸಂಪುಟ-೧

೧೯೬೭ (ಪ್ರ.ಮು) ಸಂಶೋಧನೆ ೧೯೮೪ (ದ್ವಿ.ಮು)

೧೯೭೦ ಸಂಶೋಧನ ತರಂಗ ಸಂಪುಟ-೨

೧೯೭೨ Basavanna

೧೯೭೫ ವಚನ ಸಾಹಿತ್ಯ

೧೯೭೭ ಗ್ರಾಮೀಣ

೧೯೮೧ ವಾಗರ್ಥ

೧೯೮೨ ಪೂರ್ಣಸೂರ್ಯಗ್ರಹಣ

೧೯೮೪ ವೀರಗಲ್ಲು ಮತ್ತು ಮಾಸ್ತಿಕಲ್ಲು

೧೯೮೪ ಪಗರಣ

೧೯೮೪ ಕನ್ನಡಸಾಹಿತ್ಯ ಮತ್ತು ಶಾಸನಗಳಲ್ಲಿ ಸಂಗೀತ ವಿಚಾರ

೧೯೮೫ ಮಧ್ಯಕಾಲೀನ ಕನ್ನಡ ಸಾಹಿತ್ತ ಮತ್ತು ಅಸ್ಪೃಶ್ಯತೆ

೧೯೮೬ ಲಿಂಗಾಯತ ಅಧ್ಯಯನಗಳು

೧೯೮೭ ಕನ್ನಡ ಸಂಸ್ಕೃತಿ ನಮ್ಮ ಹೆಮ್ಮೆ ೧೯೮೬ (ದ್ವಿ. ಮು)

೧೯೯೧ ಕರ್ನಾಟಕ ಸಂಸ್ಕೃತಿ

೧೯೯೩ ಹೊಸತು-ಹೊಸತು

೧೯೯೩ ಛಂದೋತರಂಗ

## ಸಂಪಾದಿತ ಕೃತಿಗಳು

೧೯೭೩ ಕನ್ನಡ ಪಾಠಗಳು ಸಂಪುಟ-೨
-ಚಂದ್ರಶೇಖರ ಕಂಬಾರರ ಜತೆ

೧೯೭೩ ಶಾಸನ ಪದ್ಯಮಂಜರಿ
ಆರ್. ನರಸಿಂಹಾಚಾರ್ಯರ ಸಂಪಾದನೆಯ ಪರಿಷ್ಕರಣೆ

೧೯೭೬ (ಪ್ರ. ಮು.) ಶ್ರೀಕಂಠತೀರ್ಥ (ತೀ. ನಂ. ಶ್ರೀ ಸ್ಮಾರಕ ಗ್ರಂಥ) ೧೯೮೦ (ದ್ವಿ.ಮು.)
- ತೀ. ನಂ. ನಾಗಭೂಷಣ
- ತೀ. ನಂ. ಶಂಕರನಾರಾಯಣರೊಡನೆ

೧೯೭೮ ಮಧ್ಯಕಾಲೀನ ಕನ್ನಡ ಕವಿತೆ
- ಎಂ. ಎಸ್. ವೆಂಕಟರಾವ್
- ಕಿ.ರಂ. ನಾಗರಾಜರೊಡನೆ

೧೯೮೦ ಅಧ್ಯಯನ (ಶಂ. ಬಾ. ಜೋಶಿ. ಅಭಿನಂದನ ಗ್ರಂಥ)

೧೯೮೧ ಹಳೆಯ ಗದ್ಯ ಸಾಹಿತ್ಯ -ಎಸ್. ಶಿವಣ್ಣರೊಡನೆ

೧೯೮೩ ಹಸ್ತಪ್ರತಿ ಶಾಸ್ತ್ರ
-ಎಂ. ವಿ. ಸೀತಾರಾಮಯ್ಯ ಅವರೊಡನೆ

ಅಭಿನಂದನ ಗ್ರಂಥ

೧೯೯೧ ಸಂಶೋಧನ
(ಸಂ.) ಲಕ್ಷ್ಮಣ್ ತೆಲಗಾವಿ

ಕನ್ನಡಭಾಷೆ ಮತ್ತು ಆಂಗ್ಲಭಾಷೆಗಳಲ್ಲಿ ಎರಡು ನೂರಕ್ಕೂ ಹೆಚ್ಚು ಸಂಶೋಧನಾತ್ಮಕ ಲೇಖನಗಳು

## ಅನುಬಂಧ – ೨

### ಡಾ. ಎಂ. ಚಿದಾನಂದಮೂರ್ತಿಯವರ ಜೀವನದ ಮಹತ್ವದ ಘಟನೆಗಳು

| | |
|---|---|
| ೧೦-೫-೧೯೩೧ | ಶಿವಮೊಗ್ಗೆ ಜಿಲ್ಲೆಯ ಚೆನ್ನಗಿರಿ ತಾಲ್ಲೂಕಿನ ಹಿರೇಕೋಗಲೂರಿನಲ್ಲಿ ಜನನ<br>ತಂದೆ : ಕೊಟ್ರಯ್ಯ<br>ತಾಯಿ : ಪಾರ್ವತಮ್ಮ |
| ೧೯೪೫ | ಮಾಧ್ಯಮಿಕ ಶಿಕ್ಷಣ |
| ೧೯೪೮ | ಪ್ರೌಢಶಾಲಾ ಶಿಕ್ಷಣ |
| ೧೯೫೦ | ಇಂಟರ್ ಮೀಡಿಯಟ್ ಪರೀಕ್ಷೆ ತೇರ್ಗಡೆ |
| ೧೯೫೩ | ಮೈಸೂರು ಮಹಾರಾಜ ಕಾಲೇಜಿನಿಂದ ಬಿ.ಎ.(ಆನರ್ಸ್) ಪ್ರಪ್ರಥಮ ಶ್ರೇಣಿಯಲ್ಲಿ |
| ೧೯೫೫ | ಪುಣೆಯಲ್ಲಿ ನಡೆದ ಭಾಷಾವಿಜ್ಞಾನ ಬೇಸಿಗೆ ಶಿಬಿರದಲ್ಲಿ ಭಾಷಾವಿಜ್ಞಾನ ಶಿಕ್ಷಣ |
| ೧೯೫೭ | ಮೈಸೂರು ವಿಶ್ವವಿದ್ಯಾಲಯದಿಂದ ಎಂ. ಎ ಪದವಿ(ಚಿನ್ನದ ಪದಕದೊಂದಿಗೆ) |
| ೧೯೫೭ | ಮೈಸೂರು ಯುವರಾಜ ಕಾಲೇಜಿನಲ್ಲಿ ಅಧ್ಯಾಪಕ |
| ೧೯೬೦ | ಮಾನಸ ಗಂಗೋತ್ರಿ ಸ್ನಾತಕೋತ್ತರ ವಿಭಾಗದಲ್ಲಿ ಕನ್ನಡ ಅಧ್ಯಾಪಕ |
| ೧೯೬೪ | ಎ. ವಿಶಾಲಾಕ್ಷಿಯವರೊಡನೆ ವಿವಾಹ |
| ೧೯೬೫ | ಮಗಳು ಶೋಭಾಳ ಜನನ |
| ೧೯೬೬ | ಮಗ ವಿನಯನ ಜನನ |
| ೧೯೬೮ | ಚಿಕಾಗೊ ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕ |
| ೧೯೬೯ | ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ರೀಡರ್ |
| ೧೯೭೯ | ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಸಂದರ್ಶನ ಪ್ರಾಧ್ಯಾಪಕ |

| | |
|---|---|
| ೧೯೮೦ | ಸ್ಟಾನ್‌ಫೊರ್ಡ್ ವಿಶ್ವವಿದ್ಯಾಲಯದಲ್ಲಿ ನಡೆದ ನಾಲ್ಕನೆಯ ಅಂತರ್ ರಾಷ್ಟ್ರೀಯ ಐತಿಹಾಸಿಕ ಭಾಷಾವಿಜ್ಞಾನ ಸಮ್ಮೇಳನದ ವಿಭಾಗೀಯ ಅಧ್ಯಕ್ಷ |
| ೧೯೮೨ | ಗೋಕಾಕ ಚಳುವಳಿಯ ಪ್ರಭಾವದಿಂದಾಗಿ ಕನ್ನಡಪರ ಕೆಲಸಗಳಲ್ಲಿ ತೊಡಗಿಸಿಕೊಳ್ಳುವ ಆಸಕ್ತಿ |
| ೧೯೮೬ | ಅಖಿಲಭಾರತ ದ್ರಾವಿಡ ಭಾಷಾ ವಿಜ್ಞಾನ ಸಮ್ಮೇಳನದ ಅಧ್ಯಕ್ಷ |
| ೧೯೮೮ | ಕನ್ನಡ ಶಕ್ತಿಕೇಂದ್ರದ ಸ್ಥಾಪನೆ ಮತ್ತು ಕಾರ್ಯಾಧ್ಯಕ್ಷರಾಗಿ |
| ೧೯೯೦ | ಪ್ರಾಧ್ಯಾಪಕ ವೃತ್ತಿಯಿಂದ ಸ್ವಯಂನಿವೃತ್ತಿ |

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ನಮ್ಮ ನಾಡಿನಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ, ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟುಮಾಡಿವೆ, ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು